# ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು

(ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರ ಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು :

ಶ್ರೀ ಮಧುಸೂದನ ಕ ಬೀಳಗಿ

ಮಾರ್ಗದರ್ಶಕರು :

ಡಾ. ಬಸವರಾಜ ಎನ್. ಅಕ್ಕಿ

ಸರಕಾರಿ ಪ್ರಥಮ ದರ್ಜೆ ಕಾಲೇಜು, ಅಳ್ನಾವರ.



ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,

ಹಾರೂಗೇರಿ, ಜಿ. ಬೆಳಗಾವಿ.

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ -೫೮೩೨೭೬

೨೦೦೧.



939

# ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು

(ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ನಿಬಂಧ)


ಸಂಶೋಧಕರು :

**ಶ್ರೀ ಮಧುಸೂದನ ಕ ಚೀಳಗಿ**

ಮಾರ್ಗದರ್ಶಕರು :

**ಡಾ. ಬಸವರಾಜ ಎನ್. ಅಕ್ಕಿ**
ಸರಕಾರಿ ಪ್ರಥಮ ದರ್ಜೆ ಕಾಲೇಜು, ಅಳ್ನಾವರ.







**ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,
ಹಾರೂಗೇರಿ, ಜಿ. ಬೆಳಗಾವಿ.**

## ಕನ್ನಡ ವಿಶ್ವವಿದ್ಯಾಲಯ, ಹಂಪಿ,
## ವಿದ್ಯಾರಣ್ಯ –೫೮೩೨೭೬

೨೦೧೧

# ಪ್ರಮಾಣ ಪತ್ರ

'ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು' ಎಂಬ ಶೀರ್ಷಿಕೆಯ ನಿಬಂಧವನ್ನು ಡಾ.ಬಸವರಾಜ ಎನ್. ಅಕ್ಕಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೦-೦೭-೨೦೧೧

ಶ್ರೀ ಮಧುಸೂದನ ಕ ಬೀಳಗಿ

ಸಂಶೋಧನ ವಿದ್ಯಾರ್ಥಿ

ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,

ಹಾರೂಗೇರಿ, ಜಿ. ಬೆಳಗಾವಿ.

# ಧೃಢೀಕರಣ ಪತ್ರ

ಶ್ರೀ ಮಧುಸೂದನ ಕ ಜೀಳಗಿ ಇವರು 'ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದೂ ಯಾವುದೇ ಪದವಿಗಳಗಾಗಿ ಸಲ್ಲಿಸಿರುವುದಿಲ್ಲವೆಂದೂ ಧೃಡೀಕರಿಸುತ್ತೇನೆ.



ಸ್ಥಳ : ಹಾರೂಗೇರಿ

ದಿನಾಂಕ : ೧೦-೦೬-೨೦೧೧

ಡಾ. ಬಸವರಾಜು ಎನ್. ಅಕ್ಕಿ.
ಮಾರ್ಗದರ್ಶಕರು
ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ,
ಹಾರೂಗೇರಿ, ಜಿ. ಬೆಳಗಾವಿ.

# ಕೃತಜ್ಞತೆಗಳು

ಹಲವು ವರ್ಷಗಳಿಂದ ಪಿ.ಎಚ್.ಡಿ ಮಾಡುವ ನನ್ನ ಬಯಕೆಯನ್ನು ಗುರುಗಳಾದ ಡಾ. ವ್ಹಿ.ಎಸ್. ಮಾಳಿಯವರಲ್ಲಿ ನಿವೇದಿಸುತ್ತಲೇ ಬಂದ್ದಿದ್ದೆ. ಅವರು ಮೊದಲು ಎಂ.ಫಿಲ್ ಮಾಡುವುದು ಸೂಕ್ತವೆಂದು ಹೇಳಿ ನನ್ನನು ಸಂಶೋಧನೆಯ ಗರಡಿ ಮನೆಗೆ ಕರೆತಂದರು. ಆದರೆ ಬಿಡುವಿಲ್ಲದ ಹಲವಾರು ಕೆಲಸಗಳ ಮಧ್ಯದಲ್ಲಿರುವ ನನ್ನಂಥವರಿಗೆ ಸಂಶೋಧನೆ ಸಾಧ್ಯವೇ ಎಂಬ ಅಳುಕು ಆರಂಭದಲ್ಲಿ ಕಾಡಿತು. ಆಗ ಆತ್ಮೀಯ ಭಾವನೆಯ, ಸರಳತೆಯ ಸಾಕಾರಮೂರ್ತಿಯಾದ ಡಾ. ವ್ಹಿ.ಎಸ್. ಮಾಳಿ ಗುರುಗಳು, "ಮಧು, ನೀನೂ ಸಂಶೋಧನಾ ಅಧ್ಯಯನ ಮಾಡಬಹುದು, ನಿನ್ನಲ್ಲಿ ಸಾಮರ್ಥ್ಯವಿದೆ, ಎಂದು ಹುರುಪು ತುಂಬಿದರು. ಆ ಪ್ರೇರಣೆಯ ಫಲಿತವೇ ಈ ಪ್ರಬಂಧ. ಮಾಳಿ ಗುರುಗಳು ತಮ್ಮ ಅನುಭವದ ಮೂಸೆಯಲ್ಲಿ, ನನ್ನನ್ನು ಸಂಶೋಧನೆಯಲ್ಲಿ ತೊಡಗಿಸಿಕೊಳ್ಳಲು ರೂಪಿಸಿದ್ದು, ಎಂದೂ ಮರೆಯಲಾಗದ ಒಂದು ನೆನಪು.

ಪಿ.ಎಚ್.ಡಿ ಮಾಡುವ ಆಸೆ ಕೈಗೂಡದಿದ್ದರೂ ಕೂಡ, ಎಂ.ಫಿಲ್ ಮಾಡುವ ಮೂಲಕ ಸಂಶೋಧನೆಯ ಒಂದು ಮೈಲುಗಲ್ಲನ್ನು ದಾಟಿದ ನೆಮ್ಮದಿ ದೊರಕಿದೆ. ಬಿ.ಆರ್. ದರೂರ ಸಂಶೋಧನಾ ಕೇಂದ್ರ ನಿರ್ದೇಶಕರಾದ ಡಾ. ವ್ಹಿ.ಎಸ್. ಮಾಳಿಯವರ ಸೂಚನೆಯಂತೆ 'ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು' ಎಂಬ ವಿಷಯವನ್ನು ಆಯ್ದು ಕೊಂಡು, ಡಾ. ಬಸವರಾಜ ಎನ್. ಅಕ್ಕಿ ಇವರ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದೇನೆ.

ಮಾರ್ಗದರ್ಶಕರಾದ ಡಾ. ಬಿ.ಎನ್. ಅಕ್ಕಿ ಗುರುಗಳು, ನನ್ನ ಸಂಶೋಧನೆಯ ಎಲ್ಲಾ ಹಂತಗಳಲ್ಲೂ ಆತ್ಮೀಯವಾಗಿ ಸೂಕ್ತ ಸಲಹೆಗಳನ್ನಿತ್ತು, ಸಮರ್ಥ ರೀತಿಯಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಸಂಶೋಧನಾ ಅಧ್ಯಯನದಲ್ಲಿ ಎಡವಿದಾಗ, ಅಡಿಗಡಿ! ಕೈ ಹಿಡಿದೆತ್ತಿ ನಡೆಸಿದ, ಸಂಪ್ರಬಂಧದ ಎಲ್ಲಾ ಅಧ್ಯಾಯಗಳನ್ನು ಮನವಿಟ್ಟು ಗಮನಿಸಿದ ಡಾ. ವ್ಹಿ.ಎಸ್. ಮಾಳಿಯವರಿಗೆ ಮನದುಂಬಿ ನಮನಗಳು.

ಇಂಥದೊಂದು ಸಂಶೋಧನಾ ಲೇಖನದ ಮೂಲಕ ಸ್ವಾತಂತ್ರ್ಯ ಹೋರಾಟದ ಚರಿತ್ರೆಯ ಕ್ಷೇತ್ರಕ್ಕೆ ಪರಿಚಯಿಸಿದ ಶ್ರೀ ಬಿ.ಆರ್. ಸಂಶೋಧನಾ ಅಧ್ಯಯನ ಕೇಂದ್ರಕ್ಕೆ, ಆಡಳಿತ ಮಂಡಳಿಗೆ ಮತ್ತು ಸಿಬ್ಬಂದಿ ವರ್ಗಕ್ಕೂ ನನ್ನ ಅನಂತ ವಂದನೆಗಳು.

ಸಂಶೋಧನಾ ಅಧ್ಯಯನಕ್ಕೆ ಸಹಾಯಸಹಕಾರ ನೀಡಿದ ಶ್ರೀ ಚೆನ್ನಬಸವೇಶ್ವರ ವಿದ್ಯಾವರ್ಧಕ ಸಂಘದ ಅಧ್ಯಕ್ಷರು, ಆಡಳಿತ ಮಂಡಳಿಯ ಸದಸ್ಯರು ಹಾಗೂ ಸಿಬ್ಬಂದಿ ವರ್ಗಕ್ಕೆ ನನ್ನ ನಮನಗಳು.

ಸಂಶೋಧನಾ ಪ್ರಬಂಧ ರಚನೆಗೆ ಪ್ರೇರೆಪಿಸಿದ ಪೂಜ್ಯ ತಂದೆ-ತಾಯಿಗಳಿಗೆ ಅನಂತ ವಂದನೆಗಳು. ಕರಡು ತಿದ್ದಲು ಸಹಾಯ ಮಾಡಿದ ಮಗಳು ಮಹಾಲಕ್ಷ್ಮೀಗೆ ಶುಭಾಶಯಗಳು. ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ಎಲ್ಲಾ ಹೋರಾಟಗಾರರಿಗೆ ಮತ್ತು ಹಿರಿಯರಿಗೆ, ಸಂಶೋಧನೆಗೆ ಅವಕಾಶ ಒದಗಿಸಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಾಂಗಕ್ಕೆ ವಂದನೆಗಳು.

ಶ್ರೀ ಮಧುಸೂದನ ಕ ಬೀಳಗಿ

ಸ್ಥಳ : ಹಾರೂಗೇರಿ

ದಿನಾಂಕ : ೧೦-೦೬-೨೦೧೧

# . ಪರಿವಿಡಿ .

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವೈಧಾನಿಕತೆ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವೈಧಾನಿಕತೆ

ಸ್ವಾತಂತ್ರ್ಯ ಸಂಗ್ರಾಮ ಎನ್ನುವುದು ಇಂದು ನಮಗೆ ಒಂದು ನೆನಪು. ನಮ್ಮ ಕರ್ನಾಟಕವು ಈ ಸಂಗ್ರಾಮದಲ್ಲಿ ದೇಶದ ಯಾವ ಪ್ರಾಂತಗಳಿಗಿಂತಲೂ ತನ್ನ ಕಾರ್ಯ ಸಾಧನೆಯಲ್ಲಿ ಹಿಂದೆ ಬೀಳಲಿಲ್ಲ. ತನ್ನ ಪಾಲಿನ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸಿದೆ. ಕರ್ನಾಟಕದಲ್ಲಿ ಬೆಳಗಾವಿ ಜಿಲ್ಲೆಯ ಪಾತ್ರ ಪ್ರಥಮ ಸ್ಥಾನದಲ್ಲಿದ್ದದು ಮತ್ತೂ ಉಲ್ಲೇಖನೀಯವಾಗಿದೆ.

## ೧.೧. ಅಧ್ಯಯನದ ಉದ್ದೇಶ :

ಈ ಸಂಗ್ರಾಮಕ್ಕಾಗಿ ತನು-ಮನ-ಧನ ತೆತ್ತವರು, ಜೀವನವನ್ನೇ ಮುಡುಪಾಗಿ ಇರಿಸಿದವರು ಅಪಾರ ಜನ. ೨೦ನೇ ಶತಮಾನದ ಆರಂಭದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೊಂದು ಹೊಸ ತಿರುವು ಮತ್ತು ಹುರುಪು ಮೂಡಿಬಂತು. ಇದಕ್ಕೆ ಕಾರಣ ಬಾಲಗಂಗಾಧರ ಟಿಳಕರ ಮರಣಾನಂತರ ಕಾಂಗ್ರೆಸ್ ಮತ್ತು ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿ ಬಂದು ನಿಂತವರು ಮಹಾತ್ಮಾ ಗಾಂಧೀಜಿಯವರು. ಪ್ರಪಂಚದ ಯಾವುದೇ ಭಾಗದಲ್ಲಿ ಕಂಡಿರದ, ಕೇಳಿರದ ಹೊಸ ಮಹಾಮಂತ್ರವೊಂದನ್ನು ಗಾಂಧೀಜಿ ಈ ಹೋರಾಟದಲ್ಲಿ ಬಳಸಿದರು. ಆ ಮಹಾಮಂತ್ರವೇ ಸತ್ಯ, ಅಹಿಂಸೆ, ತ್ಯಾಗ, ಬಲಿದಾನ, ಅಸಹಕಾರದ ತಂತ್ರ. ಮದ್ದು-ಗುಂಡು ತುಫಾಕಿಗಳ ಎದುರು ಸತ್ಯ ಶಾಂತಿ, ಅಹಿಂಸೆ, ತ್ಯಾಗ ಬಲಿದಾನಗಳು ಅಪೂರ್ವವಾದವುಗಳೆಂಬುದನ್ನು ತಮ್ಮ ಹೋರಾಟದ ಮೂಲಕ ಜಗತ್ತಿಗೆ ಸಾದರ ಪಡಿಸಿದರು.

ಬೇರೆ-ಬೇರೆ ದೇಶಗಳ ಸ್ವರಾಜ್ಯ ಪ್ರಾಪ್ತಿಯ ಇತಿಹಾಸ ನೋಡಿದಾಗ, ಇಪ್ಪತ್ತನೇ ಶತಮಾನವು ಕಂಡ ಭಾರತದ ಸ್ವಾತಂತ್ರ್ಯ ಹೋರಾಟ ಅಪ್ರತಿಮ ಮತ್ತು ಅದ್ವೀತಿಯ. ಪ್ರಪಂಚದ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಮಹಾತ್ಮಾ ಗಾಂಧೀಜಿಯವರು ತಮ್ಮ ಬತ್ತಳಿಕೆಯಿಂದ ಹೊಸ ಬಾಣವನ್ನು ಪ್ರಯೋಗಿಸಿದರು. ಅದುವೇ ಅಹಿಂಸಾ ಸತ್ಯಾಗ್ರಹ.

ಮಹಾತ್ಮಾ ಗಾಂಧೀಜಿಯವರು ಬ್ರಿಟಿಷ ಸರ್ಕಾರದ ವಿರುದ್ಧ ಆರಂಭಿಸಿದ ಅಹಿಂಸಾತ್ಮಕ ಹೋರಾಟದ ಕರೆಗಳು ಜನಸಾಮಾನ್ಯರ ನರನಾಡಿಗಳಲ್ಲಿ ನವಚೈತನ್ಯವನ್ನು ತುಂಬಿದವು. ಅವರ ನೀಡಿದ ಸ್ವಾತಂತ್ರ್ಯ ಪರವಾದ ಕರೆಗಳು ಜನಸಾಮಾನ್ಯರ ಮೂಲಕ ಪ್ರತಿಧ್ವನಿಸಿದವು. ಹೋರಾಟಗಾರರ ಆ ಘೋಷಣೆಗಳು ಕಡಲ ಭೋರ್ಗರೆತವನ್ನು

ಮೀರಿದ್ದವು. ಅವರ ಕಾರ್ಯಗಳು ಇವರೆಸ್ಟ್ ಶಿಖರವನ್ನೇ ಸಣ್ಣದಾಗಿಸಿದ್ದವು. ಮಹಾತ್ಮಾ ಗಾಂಧೀಜಿಯವರ ಅಸಹಕಾರ ಆಂದೋಲನದ ಕರೆಗೆ ಓಗೊಟ್ಟು ಲಕ್ಷಾಂತರ ಭಾರತೀಯ ತರುಣ–ತರುಣಿಯರು ಇದರಲ್ಲಿ ಭಾಗವಹಿಸಿದರು. ಜನಸಾಮಾನ್ಯರ ಹೃದಯದಲ್ಲಿ ಹತ್ತಿದ ಸ್ವಾತಂತ್ರ್ಯ ಜ್ಯೋತಿಯ ಹಣತೆಯೂ ಅದೆಷ್ಟೋ ಯೋಧರ ರಕ್ತದಲ್ಲೇ ಬೆಳಗಿತು. ಬ್ರಿಟಿಷರ ಮದ್ದು–ಗುಂಡುಗಳಿಗೆ ಎದೆಯೊಡ್ಡಿ ಪ್ರಾಣವನ್ನು ಕಳೆದುಕೊಂಡವರು ಸಾವಿರ–ಸಾವಿರ. ತಮ್ಮ ಕೊರಳಿಗೆ ನೇಣುಕುಣಿಕೆಯನ್ನೇ ಹಾರವಾಗಿಸಿಕೊಂಡವರು ಅನೇಕರು. ಹೋರಾಟದ ಹಾದಿಯಲ್ಲಿ ಪೊಲೀಸರ ಲಾಠಿ ಏಟಿಗೆ ಮೈಯೊಡಿ ಕಷ್ಟ–ನಷ್ಟ ಪಟ್ಟವರು ಲಕ್ಷ ಲಕ್ಷ ಜನ. ಮನೆ–ಮಠಗಳನ್ನು ತೊರೆದು ಭೂಗತರಾಗಿ ಕಾರ್ಯಮಾಡಿ ಸೆರೆಮನೆ ಸೇರಿದವರು ಲಕ್ಷೋಪ–ಲಕ್ಷದಷ್ಟು. ಹಸುಗೂಸುಗಳನ್ನು ತಮ್ಮ ಕಂಕುಳಲ್ಲಿಟ್ಟುಕೊಂಡು ಹೋರಾಟಮಾಡಿದ ವೀರ ಮಹಿಳೆಯರು ಸಾವಿರ–ಸಾವಿರ. ಈ ಎಲ್ಲಾ ಜನರ ತ್ಯಾಗ, ಬಲಿದಾನಗಳ ಪ್ರತಿಫಲವಾಗಿ ದೊರೆತದ್ದೇ ೧೯೪೭ ರ ಸ್ವಾತಂತ್ರ್ಯ. ಇಂದು ನಾವು ಅನುಭವಿಸುತ್ತಿರುವ ಸ್ವಾತಂತ್ರ್ಯ. ಈ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಕೆಲವರು ಸುದೈವದಿಂದ ಬೆಳಕಿಗೆ ಬಂದರು ಮತ್ತು ಪ್ರಸಿದ್ಧರಾದರು. ಆದರೆ ಇನ್ನೂ ಹಲವರು ಎಲೆ ಮರೆಯ ಕಾಯಿಯಂತೆಯೇ ಉಳಿದರು. ಇವರ ಪರಿಚಯ ಇಂದಿನ ಪೀಳಿಗೆಯವರಿಗೆ ಇರಲಿಕ್ಕಿಲ್ಲ. ಈ ಹೋರಾಟಗಾರರ ಬದುಕಿಗೆ ಬೆಳಕು ತುಂಬುವುದೇ ಈ ಗ್ರಂಥದ ಮುಖ್ಯ ಉದ್ದೇಶ.

ಸ್ವಾತಂತ್ರ್ಯ ಹೋರಾಟಗಾರರ ವೀರಗಾಥೆಯನ್ನು ಅವರ ಬಾಯಿಂದಲೇ ನೇರವಾಗಿ ಕೇಳುವುದು ಒಂದು ಸುಯೋಗ. ಅವರ ಹೋರಾಟದ ಹಾದಿಗಳನ್ನು ಕಂಡು ಹಿಡಿಯುವುದರ ಮೂಲಕ ಇತಿಹಾಸದ ಪುಟಗಳಲ್ಲಿ ದಾಖಲಿಸುವುದು ನಮ್ಮ ಕರ್ತವ್ಯ. ಸ್ವಾತಂತ್ರ್ಯ ಹೋರಾಟಗಾರರು ನೇರವಾಗಿ ತಿಳಿಸಿದ ತಮ್ಮ ಹೋರಾಟದ ಅನುಭವಗಳನ್ನು ಒಂದೆಡೆ ಜೋಡಿಸಿ ಬರಹರೂಪದಲ್ಲಿ ಹೊರತರುವ ಸಾಹಸವನ್ನು, ಹಿಂದಿನಿಂದಲೂ ಬಹಳಷ್ಟು ಲೇಖಕರು ಮಾಡುತ್ತ ಬಂದಿದ್ದಾರೆ. ಇಂತಹ ಸ್ವಾತಂತ್ರ್ಯ ಯೋಧರ ದಾಖಲೆಗಳನ್ನು ಸಂಗ್ರಹಿಸುವಾಗ ಅನಿವಾರ್ಯ ಕಾರಣಗಳಿಂದ ಅನೇಕ ಸ್ವಾತಂತ್ರ್ಯ ಯೋಧರ ಮಾಹಿತಿಗಳು ಬಿಟ್ಟು ಹೋಗಿವೆ. ಅಂಥವುಗಳಲ್ಲಿ ಒಂದಾದ, ಹಿಡಕಲ್ಲ ಗ್ರಾಮದ ಸ್ವಾತಂತ್ರ್ಯ ಯೋಧರ ಮಾಹಿತಿಗಳನ್ನು, ಪತ್ತೆ ಹಚ್ಚಿ ಗುರುತಿಸುವ ಆಶಯವೇ ಈ ಗ್ರಂಥದ ಉದ್ದೇಶವಾಗಿದೆ.

ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಚರಿತ್ರೆಯಲ್ಲಿ ಇಂತಹ ಜಾಗೃತ ಸ್ಥಳದ ಹಾಗೂ ಕ್ರೀಯಾಶೀಲರಾಗಿ ಹೋರಾಟ ಮಾಡಿದ ಸ್ವಾತಂತ್ರ್ಯ ಸೇನಾನಿಗಳ ಹೆಸರಿಲ್ಲದಿರುವುದು ಅಚ್ಚರಿಯದ ಸಂಗತಿ. ಅವರಲ್ಲಿ ಈಗ ಬಹಳಷ್ಟು ಜನ ಈಗಿಲ್ಲ. ಕೇಲವೇ ಕೆಲವು ಜನರಷ್ಟು ಬದುಕುಳಿದಿದ್ದಾರೆ. ಅವರಿಗೆ ತಾವು ಸ್ವಾತಂತ್ರ್ಯ ಸೇನಾನಿಗಳು ಅಂತ ಅನ್ನಿಸಿಕೊಳ್ಳಬೇಕು ಮತ್ತು ಅವರ ಹೋರಾಟದ ಚರಿತ್ರೆಗಳು ಪ್ರಕಟಗೊಳ್ಳಬೇಕು, ಅನ್ನುವ ಯಾವುದೇ ಇಚ್ಛೆ ಇಲ್ಲ. ಯಾಕೆಂದರೆ, ಮೂಲತಃ ಕಾಂಗ್ರೇಸ್ಸಿನವರ ತತ್ವವೇ ಅದಾಗಿತ್ತು. ಅವರು ಪ್ರಚಾರ ಪ್ರಿಯರಲ್ಲ. ಅವರೆಲ್ಲಾ ನಿಸ್ವಾರ್ಥ ದೇಶಭಕ್ತರು. ದೇಶಭಕ್ತರ ದೇಶಭಕ್ತಿಯನ್ನು

ಸ್ವಾತಂತ್ರ್ಯಕ್ಕಾಗಿ ಮಾಡಿದಂತಹ ಆ ಪರಿಶ್ರಮವನ್ನು ಗುರುತಿಸದೇ ಇರುವುದು ಇತಿಹಾಸಕ್ಕೆ ಬಗೆದ ಅವಮಾನ. ಆ ದಿಸೆಯಲ್ಲಿ ಹಿಡಕಲ್ಲದಲ್ಲಿರುವ ಎಲ್ಲಾ ಸ್ವಾತಂತ್ರ್ಯ ಸೇನಾನಿಗಳ ಅಧ್ಯಯನವನ್ನು ಮಾಡುವುದು ಅಗತ್ಯವೆನಿಸಿದ್ದು, ಈ ಕಾರಣಕ್ಕಾಗಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಭಾರತ ಪರತಂತ್ರದಿಂದ ಬಿಡುಗಡೆಗೊಂಡು ಆರು ದಶಕಗಳು ಸಂದಿವೆ. ನಾಡಿನಲ್ಲೆಡೆ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಬಹಳ ಅದ್ದೂರಿಯಾಗಿಯೇ ಆಚರಿಸಲಾಗಿದೆ. ಈ ಸಂದರ್ಭದಲ್ಲಿ ನಾಡಿನೆಲ್ಲೆಡೆ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರಾಗ್ರಣಿಗಳ ಸ್ಮೃತಿ ಮತ್ತು ಅನುಭವಗಳನ್ನು ಸಂಗ್ರಹಿಸಿ ಲೇಖಗಳನ್ನು ಮುದ್ರಿಸಿ ಹೊರತರಲಾಗುತ್ತಿದೆ. ಮುಂದಿನ ಪೀಳಿಗೆಯವರಿಗೆ, ತಮ್ಮ ಹಿಂದಿನ ಹಿರಿಯರು ಸ್ವಾತಂತ್ರ್ಯಕ್ಕಾಗಿ ಯಾವ ರೀತಿ ಹೋರಾಟ ಮಾಡಿದರೆಂಬುದು ಸರಿಯಾಗಿ ತಿಳಿಯಲು ಇತಿಹಾಸ ರಚಿಸಬೇಕು. ಇತಿಹಾಸವನ್ನು ಮರೆತವರು, ಇತಿಹಾಸವನ್ನು ಸೃಷ್ಟಿಸಲಾರರು. ಹಿಂದೆಂದಿಗಿಂತಲೂ ಇಂದು ಸ್ವಾತಂತ್ರ್ಯದ ಮಹತ್ವವನ್ನು ಮನಗಾಣಬೇಕಾಗಿದೆ. ಅಗಸ್ಟ್ ೧೫ ಕ್ಕೆ ಮಾತ್ರ, ಸ್ವಾತಂತ್ರ್ಯ ವಿಚಾರ ಮತ್ತು ಸ್ವಾತಂತ್ರ್ಯ ಹೋರಾಟಗಾರರಿಗೆ ಗೌರವ, ನಮನಗಳು ಸಿಮೀತವಾದದ್ದು ವಿಷಾದನೀಯ. ದೇಶ ಕಟ್ಟಿದ ದೇವರುಗಳಿಗೆ ಈ ನಾಡಿನಲ್ಲಿರುವ ನಾವೆಲ್ಲರು, ನಾವು ಬದುಕಿರುವ ತನಕ ಅವರಿಗೆ ಕೃತಜ್ಞರಾಗಿ ಇರಬೇಕಾದದ್ದು ನಮ್ಮೆಲ್ಲರ ಧರ್ಮ. ಅಂತಹ ಯೋಧರನ್ನು ಸ್ಮರಿಸುವ ಒಂದು ಚಿಕ್ಕ ಕೈಂಕರ್ಯ ಇಲ್ಲಿದೆ.

**೧.೨. ಅಧ್ಯಯನದ ಸ್ವರೂಪ ಹಾಗೂ ವ್ಯಾಪ್ತಿ :**

ಕನ್ನಡ ನಾಡಿನ ಗಂಡುಮೆಟ್ಟಿನ ನೆಲ ಹಾಗೂ ವೀರರನಾಡು ಎಂದು ಪ್ರಸಿದ್ಧವಾದ ಬೆಳಗಾವಿ ಜಿಲ್ಲೆಯ ಒಂದು ಪ್ರಮುಖ ಸ್ಥಳವೆಂದರೆ ಬಾಗಿನಾಡು. ರಟ್ಟರ ಉಪರಾಜಧಾನಿಯಾಗಿ, ಸರ್ವಧರ್ಮ ಸಮನ್ವಯದ ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ವ್ಯಾಪಾರಿ ಕೇಂದ್ರವಾಗಿ ಬಾಗಿನಾಡು ಮೆರೆದಿದೆ. ಸಹಜವಾದ ನಿಸರ್ಗ ಸೌಂದರ್ಯದಿಂದ ಕೂಡಿರುವ ಬಾಗಿನಾಡನ್ನು ಹಲವು ಹೆಸರುಗಳಿಂದ ಶಾಸನಗಳಲ್ಲಿ ಕರೆಯಲಾಗಿದೆ.

"ರಾಯಬಾಗದ ಮೊದಲ ಹೆಸರು ಪೂವಿನಬಾಗೆ ಇಲ್ಲವೇ ಬಾಗಿ ಎಂದು ಶಾಸನಗಳಿಂದ ತಿಳಿದು ಬರುತ್ತದೆ. ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಕ್ರಿ.ಶ ೧೧೮೫ ರ ಹಣ್ಣಿಕೇರಿ ಶಾಸನದಲ್ಲಿ 'ಬಾಗಿ' ಎಂದು ಉಲ್ಲೇಖವಾಗಿದೆ. ಇದೊಂದು ಘಟಿಕಾಸ್ಥಾನವೂ ಹೌದು."[೧] ಕ್ರಿ.ಶ ೧೨ನೆಯ ಶತಮಾನದ ಕವಿ ರಾಜಾದಿತ್ಯನು ಪೂವಿನಬಾಗೆ ಎಂದು ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಅನಂತರ ಇದು ರಾಯಬಾಗವಾಗಿ ರೂಢಿಯಾಯಿತು. ಅಂದಿನ ಕಾಲದಲ್ಲಿ ಈ ಭಾಗದಲ್ಲಿ ವಿವಿಧ ಹೂಗಳು ಇಲ್ಲಿ ಬೆಳೆಯುತ್ತಿದ್ದುದರಿಂದ ಪೂವಿನಬಾಗೆ ಎಂದು ಹೆಸರು ಪಡೆದಿತ್ತು.

ನಿಸರ್ಗ ಸೌಂದರ್ಯದಿಂದ ಕೂಡಿದ ರಾಯಬಾಗ ಪಟ್ಟಣವು ಕನ್ನಡ ಸಾರಸ್ವತ ಲೋಕಕ್ಕೆ ರಾಜಾದಿತ್ಯನಂತಹ ಶ್ರೇಷ್ಠ ಕವಿ ಹಾಗೂ ಗಣಿತತಜ್ಞನನ್ನು ಕಾಣಿಕೆಯಾಗಿ ನೀಡಿದೆ. ಈ ಪಟ್ಟಣವು ಕುಮಾರ ಕೀರ್ತಿ ಪಂಡಿತ ದೇವರಂತಹ ಶ್ರೇಷ್ಠ ಮುನಿಗಳ ಆವಾಸಸ್ಥಾನ ಹಾಗೂ ಹಲವು ಧರ್ಮಗಳ ಕೇಂದ್ರ ಸ್ಥಾನವು ಆಗಿತ್ತೆಂದು ಇತಿಹಾಸದ ಪುಟಗಳಲ್ಲಿ ದಾಖಲಿಸಲ್ಪಟ್ಟಿದೆ.

ರಾಜಾದಿತ್ಯನ ವ್ಯವಹಾರ ಗಣಿತ ಗ್ರಂಥದಲ್ಲಿನ ವಿವರಣೆಯಂತೆ ರಾಯಬಾಗವು ಒಂದೊಮ್ಮೆ ಜೈನ ಧರ್ಮದ ತಾಣವಾಗಿ ಮೆರೆದಿತ್ತು. ರಾಯಬಾಗವು 'ಕುಹೂಂಡಿ ಮೂಸಾಸಿರ' ಆಡಳಿತದ ಒಂದು ಭಾಗವಾಗಿದ್ದು ದಕ್ಷಿಣಕ್ಕೆ ಘಟಪ್ರಭಾ, ಉತ್ತರಕ್ಕೆ ಕೃಷ್ಣಾನದಿಯ ಮಧ್ಯದ ನಿಸರ್ಗ ರಮಣೀಯ ತಾಣವಾಗಿದೆ. ಕುಹೂಂಡಿ ಮೂಸಾಸಿರ ನಾಡಿಗೆ ರತ್ನ ಸಮಾನವಾಗಿ ಪೂವಿನಬಾಗೆ ಇತ್ತೆಂಬುದನ್ನು ರಾಜಾದಿತ್ಯ ಹೇಳುತ್ತಾನೆ. ಇಂತಹ ಪೂವಿನಬಾಗೆ ರಾಯಬಾಗವಾಗಿ ಮಾರ್ಪಾಟಾಗಿದ್ದು ಇನ್ನೂ ಸೋಜಿಗದ ಚರಿತ್ರೆ.

ಪೂವಿನಬಾಗಿಯು ಅಂದು ಮರಾಠಾ ಪೇಶ್ವೆಗಳ ಆಳ್ವಿಕೆಯಲ್ಲಿ ಕೊಲ್ಹಾಪುರ ಸಂಸ್ಥಾನದಲ್ಲಿ ವಿಲೀನಗೊಂಡಿತ್ತು. ಇಂತಹ ಪಟ್ಟಣವು, ಬೆಳಗಾವಿ ಜಿಲ್ಲಾ ಕೇಂದ್ರ ಸ್ಥಾನದಿಂದ ೯೬ ಕಿ.ಮಿ. ಉತ್ತರ ಭಾಗದಲ್ಲಿದ್ದು, "೧೬' ೨೧' ಉತ್ತರ ಅಕ್ಷಾಂಶದಿಂದ ೧೬' ೪೨' ಉತ್ತರ ಅಕ್ಷಾಂಶ ಹಾಗೂ ೭೪'೪೨' ಪೂರ್ವ ರೇಖಾಂಶದಿಂದ ೭೫' ೦೫' ಪೂರ್ವ ರೇಖಾಂಶಗಳ ಮಧ್ಯದಲ್ಲಿ ಹರಡಿದೆ. ಸಮುದ್ರ ಮಟ್ಟದಿಂದ ಸರಾಸರಿ ೪೫೦ ರಿಂದ ೯೦೦ ಮೀಟರ ಎತ್ತರದಲ್ಲಿದೆ." [೨] ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ೫೮೯.೫ ಮಿ. ಮೀ. ಉತ್ತರ ಮತ್ತು ವಾಯುವ್ಯ ಭಾಗದಲ್ಲಿ ಕೃಷ್ಣಾ ನದಿ ಹರಿದಿದೆ. ಕೃಷ್ಣಾ ಕಣಿವೆ ಪ್ರದೇಶ ಬಿಟ್ಟರೆ ಉಳಿದೆಡೆ ಫಲವತ್ತಾದ ಮಣ್ಣು ಕಂಡು ಬರುವುದಿಲ್ಲ. ಸ್ವಲ್ಪ ದೂರದಲ್ಲಿಯೇ ಕೃಷ್ಣಾ ಹಾಗೂ ಘಟಪ್ರಭಾ ನದಿಗಳು ಹರಿಯುತ್ತಿರುವುದರಿಂದ ಈ ಭೂಪ್ರದೇಶ ನಂದನವನವಾಗಿ ಕಂಗೊಳಿಸುತ್ತಿದೆ. ಕುಂತಣಬಾಗೆ ೧೭೮೧೭ ಹೆಕ್ಟೇರುಗಳಷ್ಟು ವಿಸ್ತೀರ್ಣವನ್ನು, ೨೦೦೧ ರ ಜನಗಣತಿಯ ಪ್ರಕಾರ ೩೮೫೦೦೦ ರಷ್ಟು ಜನಸಂಖ್ಯೆಯನ್ನು ಒಳಗೊಂಡಿದೆ. ಇದು ಸಮಶೀತೋಷ್ಣ ವಾತಾವರಣದಿಂದ ಕೂಡಿದ ಪ್ರದೇಶವಾಗಿದೆ.

ಬೆಳಗಾವಿ ಜಿಲ್ಲೆಯಲ್ಲಿ 'ಹಿಡಕಲ್ಲ' ಹೆಸರಿನ ಎರಡು ಗ್ರಾಮಗಳಿವೆ. ಒಂದು ಹುಕ್ಕೇರಿ ತಾಲೂಕಿನಲ್ಲಿದೆ. ಇನ್ನೊಂದು ರಾಯಬಾಗ ತಾಲುಕಿನಲ್ಲಿದೆ. ಹುಕ್ಕೇರಿ ತಾಲೂಕಿನ ಹಿಡಕಲ್ಲನಲ್ಲಿ ರಾಜಾ ಲಖಮನಗೌಡ ಆಣೆಕಟ್ಟು ಇದೆ. ಸಾಮಾನ್ಯವಾಗಿ ರಾಯಬಾಗ ತಾಲೂಕಿನಲ್ಲಿಯ ಹಿಡಕಲ್ಲನ್ನು, 'ಹಾರೂಗೇರಿ ಹಿಡಕಲ್ಲ' ಎಂದು ಗುರುತಿಸಿದ್ದಾರೆ.

ಹಿಡಕಲ್ಲ ಹಾರೂಗೇರಿಗಿಂತ ಚಿಕ್ಕ ಗ್ರಾಮವಾಗಿ, ಹಾರೂಗೇರಿಯ ಮೂಲಕ ಗುರುತಿಸಿಕೊಳ್ಳುತ್ತದೆ. ಅದರೆ, ಹಾರೂಗೇರಿ ಇಂದು ವ್ಯಾಪಾರ ಕೇಂದ್ರವಾಗಿ, ಅಭಿವೃದ್ಧಿ

ಕಂಡಿರಬಹುದು, ಹಿಡಕಲ್ಲ ತನ್ನ ಪಾರಂಪರಿಕ ಸಾಂಸ್ಕೃತಿಕ ಪರಂಪರೆಯಿಂದಾಗಿ ಇಂದಿಗೂ ರಾಯಬಾಗ ತಾಲೂಕಿನ ಇತಿಹಾಸದಲ್ಲಿ ತೀವ್ರ ಗಮನ ಸೆಳೆಯುತ್ತದೆ. ಹಿಡಕಲ್ಲನ ಇತಿಹಾಸವನ್ನು ಶೋಧಿಸಿದಂತೆ, ಹೊಸ-ಹೊಸ ಸಂಗತಿಗಳು ಬೆಳಕಿಗೆ ಬರುತ್ತಲೇ ಹೋಗುತ್ತವೆ. ಇವೆಲ್ಲವುಗಳ ಮಧ್ಯ ಸ್ವಾತಂತ್ರ್ಯಪೂರ್ವದಲ್ಲಿ ತೀವ್ರ ಕ್ರೀಯಾಶೀಲವಾಗಿದ್ದ ಬೆಳಗಾವಿ ಜಿಲ್ಲೆಯ ಬೆರಳೆಣಿಕೆಯಷ್ಟು ಗ್ರಾಮಗಳಲ್ಲಿ ಹಿಡಕಲ್ಲ ಕೂಡ ಒಂದು.

ಹಿಡಕಲ್ಲ ತಾಲೂಕಾ ಸ್ಥಳದಿಂದ ಸುಮಾರು ೨೦ ಕಿ.ಮೀಟರ ಅಂತರದಲ್ಲಿರುವ ಗ್ರಾಮ. ಸುಮಾರು ೧೫೦೦೦ ಜನಸಂಖ್ಯೆಯನ್ನು ಹೊಂದಿರುವ ಅಪ್ಪಟ ಜಾನಪದದ ಪರಿಸರವನ್ನೊಳಗೊಂಡದ್ದು, ಈ ಹಳ್ಳಿಯು ಇಂದು ಕೂಡ ತನ್ನ ಸೊಗಡನ್ನು ಬಿಟ್ಟು ಕೊಟ್ಟಿಲ್ಲ. ಹಿಡಕಲ್ಲ ಗ್ರಾಮನಾಮ ನಿಷ್ಪತ್ತಿಯನ್ನು ಹೀಗೆ ಅರ್ಥೈಯಿಸಬಹುದು.

೧) ಹಿಡಿಗಲ್ಲು = ಹಿಡಕಲ್ಲು = ಹಿಡಕಲ್ಲ.
ಹಿಡಿ = ಹಿಡಿಕೆ, ಮುಷ್ಟಿಯಲ್ಲಿ ಹಿಡಿಯುವಷ್ಟು+ ಕಲ್ಲು
೨) ಹಿಂಡು + ಕಲ್ಲು = ಹಿಂಡ್ಕಲ್ಲ = ಹಿಡಕಲ್ಲ.
ಹಿಂಡು = ಗುಂಪು.
೩) ಪಿಟ್ಟು + ಕಲ್ಲು =ಪಿಟ್ಟಗಲ್ಲು > ಪಿಡಕಲ್ಲು > ಹಿಡಕಲ್ಲು > ಹಿಡಕಲ್ಲ.

ಈ ಗ್ರಾಮದ ಪಕ್ಕದಲ್ಲಿಯೇ ಖಣದಾಳ ಎಂಬ ಗ್ರಾಮವಿದೆ. ಅಲ್ಲಿ ಕಲ್ಲಿನ ಗಣಿಗಳಿವೆ. ಈಗಲೂ ಅಲ್ಲಿ ಒಡ್ಡರ ಸಂಖ್ಯೆ ಹೆಚ್ಚು. ಪ್ರಾಯಶಃ ಇವೆರಡು ಇತಿಹಾಸ ಪೂರ್ವದ ಮಾನವನ ನೆಲೆಗಳಾಗಿರಬಹುದು.

ಹಿಂದೆ ಕೊಲ್ಲಾಪೂರ ಸಂಸ್ಥಾನದ ಆಡಳಿತಕ್ಕೆ ಒಳಪಟ್ಟ ಈ ಗ್ರಾಮವು ಸಂಸ್ಥಾನದ ತುಂಬೆಲ್ಲಾ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಇದಕ್ಕೆ ಕಾರಣ ಪ್ರಸಿದ್ಧ ಕುಸ್ತಿ ಪೈಲವಾನರಾದ ಅಪ್ಪಾಜಪ್ಪ ಮತ್ತು ದೇವಪ್ಪ ಬೆಳಗಲಿ ಯವರ ಖ್ಯಾತಿ. ಸತ್ಯಶೀಲ ಆಟದ ಖ್ಯಾತಿ ಹೊಂದಿದ್ದ ಆಟದ ಕಲ್ಲಪ್ಪನನ್ನು ನೀಡಿದ್ದು ಈ ಗ್ರಾಮದ ಇನ್ನೊಂದು ವೈಶಿಷ್ಟ್ಯ. ಕೌಜಲಗಿ ನಿಂಗಮ್ಮನ ಜೊತೆಯಲ್ಲಿ ಶ್ರೇಷ್ಠ ಭಾಗವತನಾಗಿ ನಟಿಸಿ, ಕಲಾ ರಂಗಕ್ಕೆ ಕಾಣಿಕೆಯನ್ನು ನೀಡಿದ ಆಟದ ಭೀಮಪ್ಪನು ಕೂಡ ಇದೇ ಹಳ್ಳಿಯ ಕುಡಿ ಎನ್ನುವುದು ಸತ್ಯ. ಪಾರಿಜಾತ ರಂಗಭೂಮಿಯ ಶ್ರೇಷ್ಠ ಕಾಲಾವಿದೆ ಮಾಲಾ ಪಾರ್ಥನಹಳ್ಳಿ ಇಲ್ಲಿಯ ಹೆಮ್ಮೆಯ ಮನೆಮಗಳು. ಈಗಲೂ ನಾಟಕ ಕಂಪನಿಗಳು ಡೊಳ್ಳಿ ಹಾಡಿನ ಗಾಯನದ ಮೇಳಗಳಿವೆ. ಹೀಗೆ ಕವಿ, ಕಲಾವಿದರು, ಪೈಲ್ವಾನರು ಹಾಗೂ ಸ್ವಾತಂತ್ರ್ಯ ಹೋರಾಟಗಾರರಿಗೆ ಜನ್ಮ ಕೊಟ್ಟ ನೆಲ ಹಿಡಕಲ್ಲಿನದು.

ಬಾಗೆ ನಾಡಿನ ಒಂದು ಭಾಗವಾದ ಹಿಡಕಲ್ಲ ಗ್ರಾಮವು ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿರುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಗ್ರಾಮವು ಅಥಣಿ ತಾಲೂಕಿನ ವ್ಯಾಪ್ತಿಯಲಿದ್ದು, ತೇರದಾಳ ಅಂಚೆ ಕಛೇರಿಯನ್ನು ಹೊಂದಿತ್ತು. ಅಂದು ರಾಮಪ್ಪ ಮುರಾರೆಪ್ಪ ಕಂಕಣವಾಡಿ, ಭೀಮಪ್ಪ ಚೆನ್ನಪ್ಪ ಬಡಿಗೇರ, ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ, ಮೌಲಾಲಿ ಹುಸೇನಸಾಬ ಮುಲ್ಲಾ, ವಾಸುದೇವ ಅಲ್ಲಪ್ಪ ನಾಯಿಕ. ಲಕ್ಷ್ಮಣ ಅಣ್ಣಪ್ಪ ಡಾಂಗೆ, ಭೀಮಾ ಮಾಯಪ್ಪ ಕದಮ, ಮಲ್ಲಪ್ಪ ಪರಪ್ಪ ಕೊಕಟನೂರ, ಬಸಪ್ರಭು ದುಂಡಪ್ಪ ದಲಾಲ, ಶಂಕರ ಬಸವಂತಪ್ಪ ಪತ್ತಾರ, ಮಧ್ವರಾಜ ಬಾಳಕೃಷ್ಣ ದೇಶಪಾಂಡೆ ಮುಂತಾದ ಯೋಧರು, ನೂರಾರು ಕಾರ್ಯಕರ್ತರು, ಹೋರಾಟದ ಹಾದಿಯನ್ನು ತುಳಿದ ಶಾಲಾ ವಿದ್ಯಾರ್ಥಿಗಳನ್ನು ನೆನಪಿಸಿಕೊಳ್ಳುವುದೇ ಸುದೈವ. ಸ್ವಾತಂತ್ರ್ಯ ಆಂದೋಲನದಲ್ಲಿ ಹಿಡಕಲ್‌ದ ಪಾತ್ರ ಅಭ್ಯಸನೀಯವಾಗಿದ್ದು, ಅದನ್ನು ಸಮೀಕ್ಷಿಸುವ ಪ್ರಯತ್ನ ಈ ನಿಬಂಧದ್ದು.

ಪ್ರಸ್ತುತ ಅಧ್ಯಯನದ ಗ್ರಂಥದಲ್ಲಿ ಒಟ್ಟು ಐದು ಅಧ್ಯಾಯಗಳಿದ್ದು, ಮೊದಲ ಅಧ್ಯಾಯ, ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಯನ್ನು ನಿರೂಪಿಸುತ್ತದೆ. ಅಧ್ಯಾಯ ಎರಡು, ಈ ನಿಬಂಧದ ಹೃದಯ ಭಾಗವಾಗಿದ್ದು, ಇಲ್ಲಿ ಹಿಡಕಲ್‌ದ ಸ್ವಾತಂತ್ರ್ಯ ಯೋಧರನ್ನು ಪರಿಚಯಿಸಲಾಗಿದೆ. ಮೂರನೆಯ ಅಧ್ಯಾಯ ಸ್ವಾತಂತ್ರ್ಯ ಚಳುವಳಿಯಲ್ಲಿ ಹಿಡಕಲ್ಲದ ಹೆಜ್ಜೆಗಳನ್ನು ಗುರುತಿಸುತ್ತದೆ. ನಾಲ್ಕನೆಯ ಅಧ್ಯಾಯದಲ್ಲಿ ಆ ಸ್ವಾತಂತ್ರ್ಯ ಹೋರಾಟಗಾರರ, ಹೋರಾಟದ ಸ್ವರೂಪ ಹಾಗೂ ಪರಿಣಾಮಗಳನ್ನು ವಿವೇಚಿಸಲಾಗಿದೆ. ಐದನೆಯ ಅಧ್ಯಾಯ, ಸಮಾರೋಪ. ಈ ಅಧ್ಯಾಯ ಈ ನಿಬಂಧದ ಒಟ್ಟು ಫಲಶ್ರುತಿಯನ್ನು ನಿವೇದಿಸುತ್ತದೆ.

ಈ ಪ್ರಸ್ತುತ ಅಧ್ಯಯನ ಆರಂಭವಾಗುವುದೇ ಒಂದು ನಿರ್ದಿಷ್ಟವಾದಂತಹ ಕಾಲ ಘಟ್ಟದೊಳಗೆ. ಇಂತಹ ಕ್ರೀಯಾಶೀಲವಾಗಿರುವ ಅಲ್ಲಿಯ ಚಟುವಟಿಕೆಗಳಿಗೆ ಕೆಲವು ಜನ ಆಧಾರ ಸ್ತಂಭವಾಗಿದ್ದರು. ಇವರಲ್ಲಿ ಕೆಲವರು ಪ್ರತ್ಯಕ್ಷವಾಗಿ, ಇನ್ನೂ ಕೆಲವರು ಅಪ್ರತ್ಯಕ್ಷವಾಗಿ ಹೋರಾಟಕ್ಕೆ ಬೆಂಬಲ ಸೂಚಿಸಿದ್ದರು.

ಅಂದು ನೆರೆಹೊರೆಯ ಗ್ರಾಮಗಳಲ್ಲಿ ಸ್ವಾತಂತ್ರ್ಯದ ಕಿಚ್ಚು ಅಷ್ಟಾಗಿ ಕಂಡು ಬರಲಿಲ್ಲ ಅದಕ್ಕೆ ಕಾರಣ ಅವು ಅಂದು ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿದ್ದು ಕೂಡ ಒಂದು ಕಾರಣವಿರಬಹುದು. ಬ್ರಿಟಿಷರ ಆಡಳಿತದ ವಿರುದ್ಧ ಧ್ವನಿ ಎತ್ತಿದವರಲ್ಲಿ ತೀವ್ರ ಶಿಕ್ಷೆಗೆ ಒಳಗಾಗುವ ಭಯ ಅವರಲ್ಲಿ ಮೂಡಿರಬೇಕು. ಆದರೆ ಹಿಡಕಲ್ಲ ಬ್ರಿಟಿಷರ ಆಡಳಿತಕ್ಕೆ ಒಳಗಾಗದೇ ಸಂಸ್ಥಾನಿಕರ ಆಡಳಿತಕ್ಕೆ ಒಳಪಟ್ಟ ಗ್ರಾಮವಾಗಿತ್ತು. ಈ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ ಅಲ್ಲಿನ ದೇಶಪ್ರೇಮಿಗಳಿಂದಾಗಿ ಸ್ವಾತಂತ್ರ್ಯದ ಚಳುವಳಿಯ ಹಣತೆ ಹೊತ್ತಿಕೊಂಡಿತು.

ಈ ಅಧ್ಯಯನ ಹಿಡಕಲ್ಲ ಗ್ರಾಮದ ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸುವ ಹಾಗೂ ಅವರ ಹೋರಾಟದ ಸ್ವರೂಪ ಮತ್ತು ಪರಿಣಾಮಗಳನ್ನು ತೌಲನಿಕವಾಗಿ ವಿವೇಚಿಸುವ ವ್ಯಾಪ್ತಿಗೆ ಮಾತ್ರ ಸಿಮೀತಗೊಂಡಿದೆ. ಇದು ಒಂದು ಅರ್ಥದಲ್ಲಿ ತೀರಾ ಕಡಿಮೆ ವ್ಯಾಪ್ತಿಯನ್ನು ಹೊಂದಿದಂತೆ ಮೇಲ್ನೋಟಕ್ಕೆ ಕಂಡರೂ, ಅಂದಿನ ರಾಯಬಾಗ ತಾಲೂಕಿನ ಅತ್ಯಂತ ಕ್ರಿಯಾಶೀಲವಾದ ಗ್ರಾಮ ಹಿಡಕಲ್ ಆಗಿತ್ತು. ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರೆಂದರೆ, ಒಂದರ್ಥದಲ್ಲಿ ಬಾಗಿನಾಡಿನ ಸ್ವಾತಂತ್ರ್ಯದ ಹೋರಾಟವೇ ಎಂದರ್ಥ. ಹಿಡಕಲ್ಲ ಗ್ರಾಮವನ್ನು ಹೊರತು ಪಡಿಸಿ ಉಳಿದೆಡೆ ಬೆರಳೆಣಿಕೆಯಷ್ಟು ಸ್ವಾತಂತ್ರ್ಯ ಹೋರಾಟಗಾರರು ಮಾತ್ರ ಕಂಡು ಬರುತ್ತಿದ್ದು, ಅವರಿಗೆ ಸ್ಫೂರ್ತಿಯಾಗಿ ನಿಂತವರು, ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು. ಆದ್ದರಿಂದ ಪ್ರಸ್ತುತ ಈ ನಿಬಂಧ ಹಿಡಕಲ್ಲ ಗ್ರಾಮದ ಸ್ವಾತಂತ್ರ್ಯ ಚಳುವಳಿಯ ಚರಿತ್ರೆಯನ್ನು ಕಟ್ಟಲು ಮಾತ್ರ ಯೋಜಿಸಿದೆ.

**೧.೩. ಅಧ್ಯಯನದ ವೈಧಾನಿಕತೆ :**

ಇದು ಸಂಪೂರ್ಣ ಕ್ಷೇತ್ರ ಕಾರ್ಯ ಆಧಾರಿತ ಅಧ್ಯಯನವಾಗಿದೆ. ಇವರೆಗೂ ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರ ಹೋರಾಟದ ಮೇಲೆ ಬೆಳಕು ಚೆಲ್ಲಿದವರು, ಡಾ॥ ಸೂರ್ಯನಾಥ ಕಾಮತರು. ಅವರು ತಮ್ಮ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಎನ್ನುವ ಸಂಪುಟ ಮೂರರ ಪುಟ ಸಂಖ್ಯೆ ೫೦೭ ಹಾಗೂ ೫೦೮ ರಲ್ಲಿ ಇಲ್ಲಿಯ ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ ಅವರ ಹೋರಾಟವನ್ನು ವಿವರಿಸಿದ್ದು ಉಲ್ಲೇಖನಿಯ. ಹಿಡಕಲ್ಲ ಗ್ರಾಮದ ಒಬ್ಬ ಸಾಮಾನ್ಯ ಮನುಷ್ಯ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದೇ ಒಂದು ಅದ್ಭುತ. ಆತ ತಾನೊಬ್ಬನೇ ಭಾಗವಹಿಸಲಿಲ್ಲ. ತನ್ನ ಜೊತೆಗೆ ಒಂದು ತಂಡವನ್ನೇ ಕಟ್ಟಿಕೊಂಡು ಭಾಗವಹಿಸಿದ್ದ. ಆ ತಂಡದ ವಿವರಗಳನ್ನು ಡಾ॥ ಸೂರ್ಯನಾಥ ಕಾಮತರು ನೀಡಿದ್ದರೂ ಕೂಡ, ಆ ವಿವರಣೆ ಪರಿಪೂರ್ಣವಾಗಿಲ್ಲ. ಕಾಮತರು ನೀಡಿದ ಹೋರಾಟದ ಆ ಎಳೆಯನ್ನು ಹಿಡಿದುಕೊಂಡು ಪ್ರಸ್ತುತ ಅಧ್ಯಯನ ವಿಧಾನವನ್ನು ರೂಪಿಸಲು ಪ್ರಯತ್ನಿಸಲಾಗಿದೆ.

ಕಾಮತರ ನಂತರ ಬಾಳಾಜಿ ಯಮಾಜಿ ದೇಶಪಾಂಡೆ (ಅಣ್ಣೂ ಗುರೂಜಿ) ಯವರು ತಮ್ಮ 'ಬೆಳಗಾವಿ ಜಿಲ್ಲೆಯಲ್ಲಿಯ ಸ್ವಾತಂತ್ರ್ಯ ಸಮರ' ಸಂಪುಟ ಒಂದು ಮತ್ತು ಎರಡರಲ್ಲಿ ಹಿಡಕಲ್ಲದ ಸ್ವಾತಂತ್ರ್ಯ ಚಳುವಳಿಕಾರರ ಬಗ್ಗೆ ಉಲ್ಲೇಖವಿದೆ. ೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಮತ್ತು ೧೯೪೨ ರ ಚಲೇಜಾವ ಕ್ರಾಂತಿಯಲ್ಲಿ ಭಾಗವಹಿಸಿ ಸೆರೆಮನೆವಾಸ ಅನುಭವಿಸಿದ ಹಿಡಕಲ್ಲ ಗ್ರಾಮದ ಸ್ವಾತಂತ್ರ್ಯಯೋಧರ ತಂಡದಲ್ಲಿದ್ದ ೧೪ ಜನ ಹೋರಾಟಗಾರರ ಹೆಸರು ಮತ್ತು ಕಾರಾವಾಸವನ್ನು ಅನುಭವಿಸಿದ ಅವಧಿಯನ್ನು ದಾಖಲಿಸಿದ್ದಾರೆ. ಅದರೆ ಅವರು ತಮ್ಮ ಗ್ರಂಥಗಳಲ್ಲಿ ಹಿಡಕಲ್ಲದ ಎಲ್ಲ ಸ್ವಾತಂತ್ರ್ಯ ಹೋರಾಟಗಾರರ ಸವಿವರ ಚಿತ್ರಣವನ್ನು ನೀಡದೆ, ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

ಇನ್ನೂ ಮೂರನೆಯದಾಗಿ, ಡಾ॥ ಸರೋಜಿನಿ ಚವಲಾರರವರು ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ತಮ್ಮ 'ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು' ಎಂಬ ಕೃತಿಯನ್ನು ರಚಿಸಿದ್ದು, ಪುಟ ಸಂಖ್ಯೆ ೩೩೭ ಮತ್ತು ೩೩೮ ರಲ್ಲಿ ವಾಸುದೇವ ಅಲ್ಲಪ್ಪ ನಾಯಕ ಅವರ ಹೋರಾಟವನ್ನು ಅತ್ಯಂತ ಸಂಕ್ಷಿಪ್ತವಾಗಿ ವಿವರಣೆ ನೀಡಿದ್ದಾರೆ. ಅಲ್ಲದೆ ಜೇಲು ವಾಸ ಅನುಭವಿಸಿದ ೧೪ ಜನ ಹೋರಾಟಗಾರರ ಹೆಸರುಗಳ ಪಟ್ಟಿಯನ್ನು ನೀಡಿದ್ದಾರೆ. ಇಷ್ಟು ಉಲ್ಲೇಖಗಳನ್ನು ಬಿಟ್ಟರೆ, ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಬೇರೆಲ್ಲಿಯೂ ಉಲ್ಲೇಖಗಳು ಸಿಗುವುದಿಲ್ಲ. ಆದ್ದರಿಂದ ಕ್ಷೇತ್ರ ಕಾರ್ಯ ಅಧ್ಯಯನ ಕೈಕೊಂಡು ಅಲ್ಲಿಯ ಕೆಲವು ಉಲ್ಲೇಖಗಳ ಬೆನ್ನು ಹತ್ತಿ ಇತಿಹಾಸವನ್ನು ಬಗೆದು, ಹಲವು ದಾಖಲೆಗಳನ್ನು ಶೋಧಿಸಿ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವ ಒಂದು ಪ್ರಯತ್ನ ಇಲ್ಲಿದೆ. ಇದಕ್ಕೆ ಸ್ಥಳೀಯ ಅಧ್ಯಯನ ವಿಧಾನವೇ ಇದರ ವೈಧಾನಿಕತೆ.

### ೧.೪. ಅಧ್ಯಯನದ ಆಕರಗಳು :

ಹಿಡಕಲ್ಲದ ಸ್ವಾತಂತ್ರ್ಯ ಸೇನಾನಿಗಳ ಚರಿತ್ರೆ ಕಟ್ಟಲು, ಈ ಅಧ್ಯಯನದಲ್ಲಿ ಇರುವ ಪ್ರಮುಖ ಆಕರಗಳೆಂದರೆ, ಗ್ರಂಥಗಳು, ಸರಕಾರಿ ದಾಖಲೆಗಳು (ಬೆಳಗಾವಿ ಡಿವಿಜನ್ ಸೆಷನ್ ನ್ಯಾಯಾಲಯದ ಸ್ಪೇಶಲ್ ಕೇಸ ನಂ. ೧/೧೯೪೩ ಜಡ್ಜಮೆಂಟ), ಬದುಕುಳಿದ ಹೋರಾಟಗಾರರ ಮತ್ತು ಸ್ಥಳೀಯ ಹಿರಿಯರ ನೆನಪುಗಳು / ಸಂದರ್ಶನಗಳು, ಮತ್ತು ಜನಪದಸಾಹಿತ್ಯ.

### ಅ. ಗ್ರಂಥಗಳು

ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರಿಗೆ ಸಂಬಂಧಿಸಿದ ವಿವರಗಳು ಲಿಖಿತ ದಾಖಲೆಗಳಿಗೆ ಒಳಪಡದೇ ಇರುವುದು ವಿಷಾದದ ಸಂಗತಿ. ಅವರ ಕುರಿತು ಗ್ರಂಥಗಳು ನಮಗೆ ಹೆಚ್ಚಿನ ವಿವರಗಳನ್ನು ಒದಗಿಸುವುದಿಲ್ಲ. ಹೀಗಿದ್ದರೂ ಹಿಡಕಲ್ಲದ ಸ್ವಾತಂತ್ರ್ಯ ಯೋಧರ ಚಟುವಟಿಕೆಗಳನ್ನು ಅಣ್ಣೂ ಗುರೂಜಿ ತಮ್ಮ 'ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ' ಎಂಬ ಕೃತಿ ಸಂಪುಟಗಳಲ್ಲಿ ನಮೂದಿಸಿದ್ದು ಮೊದಲ ದಾಖಲೆಯೆಂದು ಒಪ್ಪಿಕೊಳ್ಳಬೇಕು. ಬೆಳಗಾವಿ ಜಿಲ್ಲೆಯ ಪಾಶ್ಚಾಪೂರದವರಾದ ಅಣ್ಣೂ ಗುರೂಜಿ ಹಿಡಕಲ್ಲದೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಜೊತೆಗೆ ಹಿಡಕಲ್ಲ ಹೋರಾಟಗಾರರ, ಹೋರಾಟಕ್ಕೆ ದಿಕ್ಸೂಚಿಯಾಗಿದ್ದರು. ಅವರು ತಮ್ಮ ಕೃತಿಯ ಎರಡು ಸಂಪುಟಗಳಲ್ಲಿ ಇಲ್ಲಿಯ ಚಟುವಟಿಕೆಗಳನ್ನು ಉಲ್ಲೇಖಿಸಿರುವರು.

ಅಣ್ಣೂ ಗುರೂಜಿಯ ನಂತರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಎಂಬ ಬೃಹತ್ ಕೃತಿಯನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದ ಡಾ॥ ಸೂರ್ಯನಾಥ ಕಾಮತರು

ಹಿಡಕಲ್ಲದ ಹೋರಾಟಗಾರರ ಮಹತ್ವದ ಸಾಧನೆಗಳನ್ನು ದಾಖಲಿಸಿರುವುದುಂಟು. ಅವರು ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ ಅವರ ಬಗ್ಗೆ ಹೆಚ್ಚಿನ ವಿವರಗಳನ್ನು ನೀಡಿದ್ದಾರೆ.

'ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು' ಡಾ॥ ಸರೋಜಿನಿ ಚವಲಾರರ ಕೃತಿ. ಇದರಲ್ಲಿ ರಾಯಬಾಗ ತಾಲೂಕಿನಲ್ಲಿಯ ಸ್ವಾತಂತ್ರ್ಯ ಹೋರಾಟದ ನೆಲೆಗಳನ್ನು ಗುರುತಿಸುವ ಪ್ರಯತ್ನವಿದೆ. ಇದರಲ್ಲಿ ತಾಲೂಕಿನ ಏಳು ಸ್ವಾತಂತ್ರ್ಯ ಹೋರಾಟಗಾರರ ಸಂಕ್ಷಿಪ್ತ ವಿವರಗಳು ಸಮಾವೇಶಗೊಂಡಿದ್ದು, ಆ ಏಳು ಜನರಲ್ಲಿ ಕೊನೆಯವರಾದ ವಾಸುದೇವ ಅಲ್ಲಪ್ಪ ನಾಯಿಕರು ಮಾತ್ರ ಹಿಡಕಲ್ಲದವರು, ಉಳಿದವರ ಹೆಸರುಗಳು ಮಾತ್ರ ನಮೂದುಗೊಂಡಿವೆ.

**ಆ. ಸರಕಾರಿ ದಾಖಲೆಗಳು**

ಬೆಳಗಾವಿ ಜಿಲ್ಲಾ ಡಿವಿಜನ್ ಸೆಷನ್ ನ್ಯಾಯಾಲಯದ ಸ್ಪೇಶಲ ಕೇಸ ನಂಬರ ೧/೧೯೪೩ ರ, ದಿನಾಂಕ ೩೧-೦೩-೧೯೪೩ ರಂದು ಮಾಡಲಾದ ನ್ಯಾಯಾಲಯದ ಆದೇಶದ ಪ್ರತಿ.

**ಇ. ಬದುಕುಳಿದ ಹೋರಾಟಗಾರರ ಮತ್ತು ಸ್ಥಳೀಯ ಹಿರಿಯರ ನೆನಮು/ಸಂದರ್ಶನಗಳು**

ಈಗ ನಮ್ಮ ಮಧ್ಯದಲ್ಲಿರುವ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಹಿಂದಿನ ಸ್ವಾತಂತ್ರ್ಯ ಚಳುವಳಿಯ ಹೋರಾಟಗಾರರನ್ನು, ಕಣ್ಣಾರೆ ಕಂಡ ಗ್ರಾಮದ ಕೆಲವೇ ಕೆಲವು ಹಿರಿಯರ ನೆನಪುಗಳು / ಸಂದರ್ಶನಗಳು.

**ಈ.ಜನಪದ ಸಾಹಿತ್ಯ**

ವಿಶೇಷವಾಗಿ ಲಾವಣಿಗಳು. ಅದರಲ್ಲಿಯೂ ಸ್ವಾತಂತ್ರ್ಯ ಹೋರಾಟಗಾರ ಭೀಮರಾವ ಕದಮ ಅವರ ಸಹೋದರ, ರಾಣಬಾ ಕದಮ ಲಾವಣಿಕಾರ. ಹಿಡಕಲ್ಲ ಸ್ವಾತಂತ್ರ್ಯ ಹೋರಾಟವನ್ನು ಕಣ್ಣಾರೆ ಕಂಡವನು. ಅದನ್ನೆಲ್ಲ ತನ್ನ ಲಾವಣಿಗಳಲ್ಲಿ ಹಿಡಿದಿಟ್ಟಿದ್ದಾನೆ, ಈ ಲಾವಣಿಗಳು ಅನುಷಂಗಿಕ ಆಕರಗಳಾಗಿವೆ.

ಪ್ರಸ್ತುತ ಅಧ್ಯಯನಕ್ಕೆ, ಈ ಮೇಲಿನ ಎಲ್ಲಾ ಆಕರಗಳನ್ನು ಬಳಸಿಕೊಂಡು ಈ ನಿಬಂಧವನ್ನು ರಚಿಸಲಾಗಿದೆ.



## ಟಿಪ್ಪಣಿಗಳು

೧) ಸೌಥ್ ಇಂಡಿಯನ ಇನಸ್ಕ್ರಿಪ್‌ಶನ್ಸ್ ಸಂಪುಟ-೨೦. ಪುಟ-೧೨.

೨) ಹೊಂಬೆಳಕು, ವಾರ್ಷಿಕ ಸಂಚಿಕೆ, ಪುಟ-೧೦.

## ಅಧ್ಯಾಯ : ಎರಡು

# ಹಿಡಕಲ್ಲದ ಸ್ವಾತಂತ್ರ್ಯ ಯೋಧರು

# ಅಧ್ಯಾಯ : ಎರಡು

# ಹಿಡಕಲ್ಲದ ಸ್ವಾತಂತ್ರ್ಯ ಯೋಧರು

---

## ೨.೧. ರಾಮಪ್ಪ ಮುರಾರೆಪ್ಪ ಕಂಕಣವಾಡಿ

ಗ್ರಾಮದ ಜನತೆಯ ಮನೋಭೂಮಿಕೆಯಲ್ಲಿ ಕ್ರಾಂತಿಯ ಬೀಜಗಳನ್ನು ಮೊಟ್ಟಮೊದಲ ಬಾರಿಗೆ ಬಿತ್ತಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ.

**ಜನನ :**

ಮುರಾರೆಪ್ಪ ಮತ್ತು ಅಮ್ಮಾಜೆವ್ವ ದಂಪತಿಗಳಿಗೆ, ರಾಯಪ್ಪ, ರಾಮಪ್ಪ, ಲಸಮವ್ವ, ಲಸಮಣ್ಣ, ಬಾಳವ್ವ, ಸಿದ್ದಪ್ಪ, ಸುರಮ್ಮ ಎಂಬ ಏಳು ಜನ ಮಕ್ಕಳಲ್ಲಿ ಎರಡನೆಯ ಮಗನೇ ರಾಮಪ್ಪ. ಇವರು ಹಿಡಕಲ್ಲ ಗ್ರಾಮದಲ್ಲಿ ಸು ಕ್ರಿ ಶ. ೧೮೮೦ರ ದಶಕದಲ್ಲಿ ಜನಿಸಿದರು.

**ಮನೆತನದ ಹಿನ್ನೆಲೆ :**

ರಾಮಪ್ಪನವರ ತಂದೆ ಮುರಾರೆಪ್ಪನವರು, ಸುಮಾರು ಕ್ರಿ.ಶ. ೧೮೦೦ರ ಆಸು-ಪಾಸಿನಲ್ಲಿ ಕಂಕಣವಾಡಿ ಗ್ರಾಮದಿಂದ, ಹಿಡಕಲ್ಲ ಗ್ರಾಮಕ್ಕೆ ವಲಸೆ ಬಂದು ಭೂಮಿ ಖರೀದಿಸಿ ನೆಲೆನಿಂತರು. ರಾಮಪ್ಪನವರು ಚಿಕ್ಕಂದಿನಲ್ಲಿ ತಂದೆಯ ಜೊತೆ ಊರೂರು ತಿರುಗಾಡಿ ಕುರಿ ಕಾಯುವ ಕೆಲಸದಲ್ಲಿ ನಿರತರಾಗಿದ್ದರಿಂದ ಶಿಕ್ಷಣದಿಂದ ವಂಚಿತರು. ಇಟ್ನಾಳದ ಗ್ರಾಮದ ಲಕ್ಕವ್ವಳ ಜೊತೆ ಕ್ರಿ.ಶ. ೧೯೦೫ರಲ್ಲಿ ಇವರ ವಿವಾಹ. ಇವರಿಗೆ ಭಾಗವ್ವ ಎಂಬ ಹೆಣ್ಣು ಮಗಳ ಜನನ. ಮುಂದೆ ಲಕ್ಕವ್ವಳಿಂದ ಮಕ್ಕಳನ್ನು ಪಡೆಯಲು ಸಾಧ್ಯವಿಲ್ಲದಿದ್ದಾಗ, ಗ್ರಾಮದ ಸದಲಗಿ (ಹಳಬರ) ಮನೆತನದ ಬೀರಪ್ಪ ಮತ್ತು ಅವನವ್ವ ದಂಪತಿಗಳ ಮಗಳಾದ ಕಲ್ಲವ್ವಳ ಜೊತೆ ಇವರ ಎರಡನೆಯ ಮದುವೆಯಾಯಿತು. ಕಲ್ಲವ್ವಳಿಂದ ಲಕ್ಕಣ, ಗಿರೆಪ್ಪ, ಗುರುಸಿದ್ದಪ್ಪ ಎಂಬ ಗಂಡು ಮಕ್ಕಳು ಹಾಗೂ ಗಂಗವ್ವ, ನಿಂಬೆವ್ವ, ರತ್ನವ್ವ ಎಂಬ ಹೆಣ್ಣು ಮಕ್ಕಳು ಜನಿಸಿದರು. ಅಂದು ರಾಷ್ಟ್ರ ವ್ಯಾಪಿಯಾಗಿ ನಡೆಯುತ್ತಿರುವ ಸ್ವಾತಂತ್ರ್ಯ ಚಳುವಳಿಯಿಂದ ಆಕರ್ಷಿತರಾಗಿ ಕುರಿ ಕಾಯುವ ಕೆಲಸವನ್ನು ಸಹೋದರರಿಗೆ ಒಪ್ಪಿಸಿ ಇವರು ಚಳುವಳಿಯಲ್ಲಿ ಪಾಲ್ಗೊಂಡರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಗೋಕಾಕ ತಾಲೂಕಿನ ಕಂಡ್ರಟ್ಟಿ ಗ್ರಾಮದ ಉದ್ದಪ್ಪ ಕೆಂಚಪ್ಪ ಎತ್ತಿನಮನಿಯವರ ಪ್ರೇರಣೆಯಿಂದ, ಇವರು ಬ್ರಿಟಿಷರ ವಿರುದ್ಧ ಪ್ರಥಮಬಾರಿಗೆ ಕ್ರಾಂತಿಯ ಕಹಳೆಯನ್ನೂದಿದವರು. ಸ್ವಾತಂತ್ರ್ಯ ಸಂಗ್ರಾಮದ ಜ್ಯೋತಿಯನ್ನು ಗ್ರಾಮದ ಮನೆ-ಮನೆಗಳಲ್ಲಿ ಹಚ್ಚಿ ಜ್ವಾಲಾಮುಖಿಯಾಗಿ ಹೊರಹೊಮ್ಮಲು ಕಾರಣಿಭೂತರಾದರು. ಆರಂಭದಲ್ಲಿ ಇವರ

ಜೊತೆ ಭೀಮಪ್ಪ ಚೆನ್ನಪ್ಪ ಬಡಿಗೇರ (ಮೇಸ್ತ್ರಿ), ರೇವಣ್ಣ ಬನಹಟ್ಟಿ, ವಾಸುದೇವ ನಾಯಿಕ, ಭೀಮರಾಯ ರಾಯಪ್ಪ ಕಂಕಣವಾಡಿ ಕಾರ್ಯಮಾಡಿದ್ದರು.

ಮಹಾತ್ಮ ಗಾಂಧೀಜಿಯ ಕರೆಯಂತೆ ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹದ ಭಾಗವಾಗಿ ಹಮ್ಮಿಕೊಂಡ ಶಿಬಿರಗಳಲ್ಲಿ ಇವರು ಹೆಸರನ್ನು ನೊಂದಾಯಿಸಿದ್ದರು. ಅಣ್ಣುಗುರೂಜಿ ಮತ್ತು ಗುರು ಮಾಸ್ತರ ಜೇರೆ ಯವರ ನೇತೃತ್ವದ ಪಥಕದಲ್ಲಿ ಸಕ್ರೀಯವಾಗಿ ಭಾಗವಹಿಸಿ ಅಥಣಿ, ಬಾಗಿನಾಡುಗಳಲ್ಲಿ ಸಂಚಾರ ಮಾಡಿ ಉಪ್ಪಿನ ಸತ್ಯಾಗ್ರಹದ ಪ್ರಚಾರ ಕೈಗೊಂಡು, ಜನಜಾಗೃತಿ ಮಾಡಿದರು.

ಕಾನೂನು ಭಂಗ ಚಳುವಳಿಯ ಅಂಗವಾಗಿ ನಡೆದ ಜಂಗಲ ಸತ್ಯಾಗ್ರಹ, ಹುಲಬನ್ನಿ ಕರ ನಿರಾಕರಣೆ, ಶಿಂಧಿಗಿಡ ಕಡಿಯುವ ಸತ್ಯಾಗ್ರಹದಲ್ಲಿ ಪಾಲ್ಗೊಂಡ ಇವರ ಬಂಧನವಾದ ಬಗ್ಗೆ, ರಾಣಬಾ ಕದಮ್ ಲಾವಣಿ ಪದ್ಯದಲ್ಲಿ ಹಿಡಿದಿಟ್ಟಿದ್ದಾರೆ.

**ಜೈ ಹಿಂದ ಅಂದ ಕಡದಾರೋ ಸಿಂದಿಬನಾನ !**
**ಪೊಲೀಸರು ಹಿಡಕೊಂಡ ಹೋಗ್ಯಾರೋ ಕಂಕಣೋಡಿ ರಾಮಣ್ಣಾನ !!**

ಗಾಂಧಿ–ಇರ್ವಿನ್ ಒಪ್ಪಂದದಂತೆ ಕಾನೂನು ಭಂಗ ಚಳುವಳಿಯಲ್ಲಿ ರಾಜಬಂಧಿಯಾಗಿದ್ದ ಇವರು ಬಿಡುಗಡೆಯಾದರು.

೧೯೩೭ರಲ್ಲಿ ಕಾಮ್ರೆಡ ಎಂ.ಎಸ್.ರಾಯ್ ಮತ್ತು ಪಂಡಿತ ಜವಾಹರಲಾಲ ನೆಹರು ಪಾಲ್ಗೊಂಡು ಗೋಕಾಕ ಸಭೆಯಲ್ಲಿ ಇವರು ಸ್ವಯಂಸೇವಕರಾಗಿದ್ದರು.

ನಿಷ್ಠಾವಂತ ಕಾಂಗ್ರೇಸ್ಸಿಗರಾದ ಇವರು ಗ್ರಾಮದಲ್ಲಿ ಕಾಂಗ್ರೇಸ್ಸನ್ನು ಕಟ್ಟಿದರು. ಜಿಲ್ಲಾ ಮತ್ತು ತಾಲೂಕಾ ಕಾಂಗ್ರೇಸ್ ಮುಂಖಡರ ಜೊತೆ ನೇರವಾದ ಸಂಪರ್ಕ ಹೊಂದಿದ್ದರು. ಅಣ್ಣುಗುರೂಜಿ, ಚೆನ್ನಪ್ಪ ವಾಲಿ, ವೆಂಕರೆಡ್ಡಿ ಹೂಲಿ, ಗವಿಸಿದ್ದಪ್ಪ ಬೆಳವಡಿ, ಶ್ರೀರಂಗ ಕಾಮತ್, ಶಿವಪ್ಪ ನಿಂಗನೂರ ಮಾಸ್ತರ, ಚೆನ್ನಮಲ್ಲಪ್ಪ ಬಸ್ತವಾಡೆ, ಕಲ್ಲಪ್ಪ ಮಿರ್ಜೆ, ನಸಲಾಪೂರದ ಸಮಾಜೆ, ಬಹದ್ದೂರ ನಿಂಗಪ್ಪ ದಳವಾಯಿ, ಅನಂತ ಕುಲಕರ್ಣಿ, ಶಿವಲಿಂಗಗೌಡ ಪಾಟೀಲ, ರಾಮಣ್ಣಾ ಗಾವಡೆ, ರತ್ನಪ್ಪಣ್ಣ ಕುಂಬಾರ, ಸಿಂಧೂರ ಲಕ್ಷ್ಮಣನ ಇನ್ನೂ ಮುಂತಾದ ಹೋರಾಟಗಾರರ ಜೊತೆ ನಿಕಟ ಸ್ನೇಹ ಸಂಪರ್ಕವನ್ನು ಹೊಂದಿದ್ದರು.

೧೯೩೭ರ ಎಪ್ರಿಲ್ ೧೭ ರಂದು ಅಖಿಲ ಭಾರತ ಗಾಂಧೀ ಸೇವಾ ಸಂಘದ ಸಮ್ಮೇಲನವು ಹುದಲಿಯಲ್ಲಿ ಏರ್ಪಟ್ಟಾಗ ಇವರ ನೇತೃತ್ವದಲ್ಲಿ ಗ್ರಾಮದ ಹೋರಾಟಗಾರರ ತಂಡವು ಭಾಗವಹಿಸಿತ್ತು. ಮಹಾತ್ಮಾ ಗಾಂಧೀಜಿಯವರು ವಿಧಾಯಕ ಕಾರ್ಯಗಳಾದ

ಹರಿಜನೋದ್ಧಾರ ಸೇವೆ ಮತ್ತು ಕುಷ್ಠ ರೋಗಿಗಳ ಉಪಚಾರ ಸೇವೆಯಲ್ಲಿ ಹಗಲಿರುಳು ದುಡಿದರು.

೧೯೩೮ರಲ್ಲಿ ಕೆ.ಎಸ್. ನಾರಿಮನ್ ಅಧ್ಯಕ್ಷತೆಯಲ್ಲಿ, ದಕ್ಷಿಣ ಭಾರತದಲ್ಲಿಯ ಸಂಸ್ಥಾನ ಪರಿಷತ್ತು ಕುಡಚಿಯಲ್ಲಿ ಸಭೆ ಸೇರಿದ್ದಾಗ, ಇವರು ಹೋರಾಟಗಾರರ ತಂಡದ ಜೊತೆ ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸಿದರು.

೧೯೩೮ರಲ್ಲಿ ಇವರು, ಭೀಮಪ್ಪ ಚೆನ್ನಪ್ಪ ಬಡಿಗೇರ, ಇಮಾಮಸಾಹೇಬ ಮುಲ್ಲಾ, ಮತ್ತು ವಾಸುದೇವ ನಾಯಿಕರ ಜೊತೆ ಗ್ರಾಮದ ಚಾವಡಿಯಲ್ಲಿ ಕುಳಿತು ಚಳುವಳಿಯ ಕುರಿತು ಚರ್ಚಿಸುತ್ತಿದ್ದರು. ನಾಲ್ಕು ಜನ ಪೊಲೀಸರ ಸಮೇತ ಅಲ್ಲಿಗೆ ಬಂದ ಬ್ರಿಟಿಷ ಪೊಲೀಸ ಅಧಿಕಾರಿಯೊಬ್ಬರು ನಾಲ್ವರನ್ನು ಬಂಧಿಸಿ ಕುಡಚಿ ಠಾಣೆಗೆ ಒಯ್ದು, ಬೆಳಗಾವಿ ಜೇಲಿಗೆ ವರ್ಗಾಯಿಸಿದರು. ೬ ತಿಂಗಳ ನಂತರ ಜೇಲಿನಿಂದ ಇವರು ಬಿಡುಗಡೆಗೊಂಡರು.

"೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಲು ಇವರಿಗೆ ಒಪ್ಪಿಗೆ ದೊರೆತಿತ್ತು".[೧] ಚಳುವಳಿನಿರತ ಹೋರಾಟಗಾರರನ್ನು ಬ್ರಿಟಿಷ ಸರಕಾರ ಬಂಧಿಸಲು ಯತ್ನಿಸಿದಾಗ ಇವರು ಭೂಗತರಾಗಿ ಕಾರ್ಯಾಚರಣೆ ಮಾಡಿದರು.

೧೯೪೨ರ ಅಗಸ್ಟ ೮ನೇ ದಿನಾಂಕದಂದು ಮುಂಬಯಿಲ್ಲಿ ನಡೆದ ಎ.ಆಯ್.ಸಿ.ಸಿ. ಅಧಿವೇಶನದಲ್ಲಿ ಇವರು ಭಾಗವಹಿಸಿದ್ದರು. ೧೯೪೨ರ ಅಗಸ್ಟ ಮತ್ತು ಸಪ್ಟೆಂಬರ ತಿಂಗಳಲ್ಲಿ, ಅಥಣಿಯ ಅನಂತ ಶಾಮರಾವ ಕುಲಕರ್ಣಿಯವರು ಮಧ್ವರಾಜ ದೇಶಪಾಂಡೆಯವರ ಮನೆಯಲ್ಲಿ ನಡೆಸಿದ ಗುಪ್ತ ಸಭೆಗಳಲ್ಲಿ ಇವರು ಭಾಗವಹಿಸಿ ತಮ್ಮ ಯೊಜನೆಗಳನ್ನು ಪ್ರಕಟಿಸಿದರು.

ಗ್ರಾಮದ ತರುಣರ ಪಡೆಯು, ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ ಯೋಜನೆಯನ್ನು ರೂಪಿಸಿದಾಗ, ಸೂಕ್ತ ಮಾರ್ಗದರ್ಶನವನ್ನು ಇವರು ನೀಡಿದ್ದರು.

ಇವರು ಕುಡಚಿ–ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ್ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ ಕಾರ್ಯದಲ್ಲಿ ಭಾಗವಹಿಸಿದ್ದರು.

ಇವರ ಮುಂದಾಳತ್ವದಲ್ಲಿಯೇ ತರುಣ ಹೋರಾಟಗಾರರ ತಂಡವು ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕಿತು. ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೆ

ಸ್ಟೇಷನ್ ಸುಡುವ ಕಾರ್ಯದಲ್ಲಿ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೇ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

ಇವರು, ೧೯೪೨ರ ಅಕ್ಟೋಬರ ತಿಂಗಳಲ್ಲಿ ಇಮಾಮಸಾಹೇಬ ಮುಲ್ಲಾರ ನೇತೃತ್ವದ ತಂಡ, ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ಯೋಜನೆ ಹಾಕಿಕೊಂಡಾಗ ಅದಕ್ಕೆ ಬೆನ್ನೆಲುಬಾಗಿದ್ದರು.

ಚಳುವಳಿಯ ಯೋಜನೆಗಳ ರೂವಾರಿಯಾಗಿದ್ದು, ಭೂಗತರಾಗಿದ್ದ ಇವರನ್ನು ಬಂಧಿಸಲು ಪೋಲೀಸರು ಶೋಧಿಸಿದರು. ಇವರು ೧೯೪೩ರಲ್ಲಿ ಪೋಲೀಸರು ಇವರನ್ನು ಬಂಧಿಸಿ ವಿಚಾರಣಾಧೀನ ಕೈದಿಯೆಂದು ಬೆಳಗಾವಿ ಕಿಲ್ಲಾ ಜೈಲಿನಲ್ಲಿಟ್ಟರು. ೨-೩ ತಿಂಗಳ ನಂತರ ಇವರನ್ನು ಬಿಡುಗಡೆಗೊಳಿಸಿದರು. ಬಿಡುಗಡೆಯ ನಂತರವು ಸ್ವರಾಜ್ಯ ಪ್ರಾಪ್ತಿಯಾಗುವವರೆಗೂ ಅವರ ಹೋರಾಟ ಅವಿರತವಾಗಿ ಸಾಗಿತ್ತು. ಭಾರತವು ೧೯೪೭ರ ಅಗಸ್ಟ ೧೫ರಂದು ಸ್ವಾತಂತ್ರ್ಯಗೊಂಡಾಗ ಗ್ರಾಮದಲ್ಲಿ ಸಿಹಿ ಹಂಚಿ ಸ್ವಾತಂತ್ರ್ಯೋತ್ಸವನ್ನು ಸಂಭ್ರಮದಿಂದ ಆಚರಿಸಿದರು.

**ಸ್ವಾತಂತ್ರ್ಯಾ ನಂತರದ ಶೈಕ್ಷಣಿಕ, ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳು :**

ಹಿಂದುಳಿದ ವರ್ಗಗಳ ಅಭಿವೃದ್ಧಿ, ಶಿಕ್ಷಣದ ಪ್ರಸಾರ ಮತ್ತು ರೈತರ ಶೋಷಣೆಯಲ್ಲಿ ತೊಡಗಿದ ಜಮಿನ್ದಾರರ ವಿರುದ್ಧ ಹೋರಾಟ ಅವರ ಮುಖ್ಯ ವಿಚಾರಗಳಾಗಿದ್ದವು. ಇವರು ಬಿ.ಡಿ.ಜತ್ತಿಯವರ ಜೊತೆ ತೀರ ಒಡನಾಟದ ಸಂಬಂಧವನ್ನು ಹೊಂದಿದ್ದರು. ಇದಕ್ಕೆ ಕಾರಣ ನಿಂಗಪ್ಪ ಬಹದ್ದೂರ ದಳವಾಯಿ.

ಮಹಾತ್ಮಾ ಗಾಂಧೀಜಿಯ ಹತ್ಯೆಯಾದ ಬಳಿಕ ಬ್ರಾಹ್ಮಣ ಮನೆತನದ ಮೇಲಿನ ಸಂಭವನೀಯ ದಾಳಿಯನ್ನು ತಡೆಗಟ್ಟಿದರು.

ಇವರ ಒತ್ತಾಸೆಯಾಗಿ ಗ್ರಾಮದಲ್ಲಿ ಮೊದಲ ಬಾರಿಗೆ ಪ್ರಾಥಮಿಕ ಶಾಲೆಯನ್ನು ಆರಂಭಿಸಿಲಾಯಿತು. ಪ್ರತಿಭಾವಂತ ಬಡ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಧನಸಹಾಯ. ೧೯೫೫ರಲ್ಲಿ ತಮ್ಮ ತೋಟದಲ್ಲಿಯೇ ಪ್ರಾಥಮಿಕ ಶಾಲೆಯನ್ನು ಆರಂಭಿಸಿ ಶಾಲೆ ನಿರ್ಮಿಸಲು ೧೧ ಗುಂಟೆ ಜಮೀನವನ್ನು ದಾನವಾಗಿ ಕೊಟ್ಟರು.

ಬೆಳಗಾವಿಯಲ್ಲಿ ಹಾಲುಮತ ಸಮಾಜದ ವಿದ್ಯಾರ್ಥಿಗಳಿಗಾಗಿ ಆರಂಭಗೊಂಡ ವಿಜಯನಗರ ಬೋರ್ಡಿಂಗ್ ಸ್ಥಾಪನೆಗೆ ಕಾರಣಿಭೂತರು. ಹರಿಜನ-ಗಿರಿಜನ ವಿದ್ಯಾರ್ಥಿಗಳಿಗೆ ವಿಜಯನಗರ ಬೋರ್ಡಿಂಗ್‌ನಲ್ಲಿ ಪ್ರಥಮ ಬಾರಿಗೆ ಅವಕಾಶ ನೀಡಿಲಾಯಿತು.

ಕಡಿಮೆ ಆದಾಯವಿರುವ ವಿದ್ಯಾರ್ಥಿಗಳಿಗೆ ಸರಕಾರದಿಂದ ಶಿಕ್ಷಣ ಶುಲ್ಕದಲ್ಲಿ ವಿನಾಯತಿಗೆ ಒತ್ತಾಯಿಸಿ ಅಂದಿನ ಕರ್ನಾಟಕ ಸರಕಾರದ ಮುಖ್ಯಮಂತ್ರಿ ಎಸ್.ಆರ್. ಕಂಠಿಯವರಿಗೆ ಮನವಿ ಅರ್ಪಣೆ.

ಘಟಪ್ರಭಾ ಎಡದಂಡೆ ಕಾಲುವೆ ನಿರ್ಮಾಣ ಕಾಮಗಾರಿಯಲ್ಲಿ ತೊಡಗಿದ ಬಡ ಕೂಲಿಕಾರ್ಮಿಕರ ನಾಲ್ಕು ಮಕ್ಕಳಿಗೆ ಶಿಕ್ಷಣ ದಾಸೋಹ.

೧೯೫೮ರಲ್ಲಿ ಮುಗಳಖೋಡದಲ್ಲಿ, ಕರ್ನಾಟಕ ರಾಜ್ಯ ಕುರುಬರ ಸಂಘಟನೆ ಮತ್ತು ಸ್ಥಳೀಯರ ಸಹಾಯದಿಂದ, 'ರಾಜ್ಯ ಮಟ್ಟದ ಸಮಾರಂಭ' ನಡೆದಾಗ ಇವರು ಪ್ರಮುಖ ಪಾತ್ರ ವಹಿಸಿದ್ದರು.

ಇವರು, ಸಂಗನಬಸಪ್ಪ ಮಲ್ಲಪ್ಪ ಜೋಗಿ (ಸಾ। ಬಳಗಾನೂರ ತಾ। ಗದಗ), ಜೊತೆ ಕೂಡಿಕೊಂಡು, ಸರಕಾರಕ್ಕೆ ಕುರಿಗಾರರು ಪ್ರತಿವರ್ಷ ಸಲ್ಲಿಸಬೇಕಾದ ಹುಲ್ಲಬನ್ನಿ ತೆರಿಗೆಯನ್ನು, ರದ್ದುಗೊಳಿಸಲು ಹೋರಾಟ ಮಾಡಿ ಸಫಲರಾದರು.

ಇವರು ದಾವಣಗೆರೆಯಲ್ಲಿ ಕುರಿಗಾರರ ಹಿತರಕ್ಷಣೆಗಾಗಿ ಹೋರಾಟ ಮ್ಹಾಡಿದರು. ಕರ್ನಾಟಕ ಸರ್ಕಾರದ ಅಂದಿನ ಮುಖ್ಯಮಂತ್ರಿ ಡಿ.ದೇವರಾಜ ಅರಸು ಅವರನ್ನು ಸಂಪರ್ಕಿಸಿ, ಕುರಿಗಾರರಿಗೆ ಕುರಿ ಮೇಯಿಸಲು ದಾವಣಗೆರೆ ಹೊರವಲಯದ ಗುಡ್ಡವನ್ನು ಸರಕಾರದಿಂದ ಉಚಿತವಾಗಿ ಕೊಡಿಸಿದರು.

ಗ್ರಾಮದಲ್ಲಿ ಜೈನ ಸಮಾಜದ ಬಾಂಧವರಿಗಾಗಿ ಜೈನ ಬಸದಿಯನ್ನು ಕಟ್ಟಿಸಿದ್ದು ಮತ್ತು ಉಪ್ಪಾರ ಸಮಾಜದ ಚಂದ್ರವ್ವ ತಾಯಿಯ ಗುಡಿಯನ್ನು ಕಟ್ಟಿಸಿದ್ದು ಅವರಲ್ಲಿನ ಸಾಮರಸ್ಯವನ್ನು ಸಾರುತ್ತದೆ. ಬೆಂಡವಾಡದ ಶ್ರೀ ರೇವಣ್ಣಸಿದ್ದೇಶ್ವರ ಮಠದ ಶಿವಯ್ಯ ಸ್ವಾಮಿಯವರನ್ನು ವಿದ್ಯಾಭ್ಯಾಸಕ್ಕಾಗಿ ಶಿವಯೋಗಿ ಮಂದಿರಕ್ಕೆ ಬಿಟ್ಟು ಬಂದರು. ವಿದ್ಯಾಭ್ಯಾಸದ ನಂತರ ೧೦೮ ಮಂಟಪ ಕಟ್ಟಿ, ಸ್ವಾಮಿಗಳ ಪಟ್ಟೋತ್ಸವದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಗ್ರಾಮ ದೇವತೆ ಹನುಮಾನ ದೇವರ ಜಾತ್ರೆಯಲ್ಲಿ ಓಕುಳಿ ಆರಂಭಸಿದರು. ಶ್ರೀ ಕೃಷ್ಣ ಪಾರಿಜಾತವನ್ನು ತಂದು ಗ್ರಾಮದ ಜನತೆಗೆ ಜನಪದ ಕಲೆಯನ್ನು ಉಣಬಡಿಸಿದ ಕೀರ್ತಿ ಇವರದು. ಇವರು ಕುಸ್ತಿ ಪ್ರಿಯರು.

**ಕೊನೆಯ ದಿನಗಳು :**

ಸ್ವಾತಂತ್ರ್ಯ ನಂತರ ಭಾತರ ಸರ್ಕಾರ ಆರಂಭಿಸಿದ ಸ್ವಾತಂತ್ರ್ಯ ಪಿಂಚಣಿಯನ್ನು ಗ್ರಾಮದ ಇತರರಿಗೆ ದೊರಕಿಸಿ ಕೊಡಲು ಪ್ರಯತ್ನಸಿದರು. ಸ್ವಾಭಿಮಾನಿಯಾದ ಅವರು ಸರ್ಕಾರದಿಂದ ಪಡೆಯಲಿಲ್ಲ. ಕ್ರಿ.ಶ. ೧೯೭೬ರಲ್ಲಿ ಮರಣ ಹೊಂದಿದರು.

## ೨.೨ ಭೀಮಪ್ಪ ಚೆನ್ನಪ್ಪ ಬಡಿಗೇರ

ಹಿಡಕಲ್ಲದ ಸ್ವಾತಂತ್ರ್ಯ ಚಳುವಳಿಯ ಚರಿತ್ರೆಗೆ ಮುನ್ನುಡಿಯನ್ನು ಬರೆದವರಲ್ಲಿ ಒಬ್ಬರಾದ ಇವರು, ಹೋರಾಟದಲ್ಲಿ ರಾಮಪ್ಪ ಕಂಕಣವಾಡಿಯವರ ನಂತರದ ಎರಡನೆಯ ಸ್ಥಾನದಲ್ಲಿದ್ದರು.

**ಜನನ :**

ಭೀಮಪ್ಪನವರ ತಂದೆ ಚೆನ್ನಪ್ಪ. ಇವರಿಗೆ, ಎರಡು ಗಂಡು ಮತ್ತು ಎರಡು ಹೆಣ್ಣು ಒಟ್ಟು ನಾಲ್ಕು ಜನ ಮಕ್ಕಳಲ್ಲಿ ಮೊದಲನೆಯ ಮಗನೇ ಭೀಮಪ್ಪ, ಸುಮಾರು ೧೯೦೦ರ ದಶಕದಲ್ಲಿ ಹಿಡಕಲ್ಲದಲ್ಲಿ ಜನಿಸಿದರು.

**ಮನೆತನದ ಹಿನ್ನೆಲೆ :**

ಭೀಮಪ್ಪ ಬಡಿಗೇರರ ಪೂರ್ವಜರು, ಹಾರೂಗೇರಿ ಗ್ರಾಮದವರು. ಇವರ ತಾತ ಉದ್ಯೋಗವನ್ನು ಅರಿಸಿಕೊಂಡು ಹಿಡಕಲ್ಲಗೆ ಬಂದು ನೆಲೆನಿಂತರು. ಸು ಕ್ರಿ.ಶ. ೧೯೨೫ರಲ್ಲಿ ಇವರ ವಿವಾಹ. ಧರ್ಮಪತ್ನಿ ಕಾಳವ್ವ, ಈ ದಂಪತಿಗಳಿಗೆ ರಾಮಪ್ಪ, ಈರಪ್ಪ, ಭಾಸ್ಕರ, ವಿಠ್ಠಲ ಎಂಬ ನಾಲ್ಕು ಜನ ಗಂಡು ಮಕ್ಕಳು. ಸುಂದರವ್ವ, ಕಾಶವ್ವ, ಚಂದ್ರವ್ವ, ಸುಬ್ಬಾಯಿ, ತುಳಜವ್ವ ಎಂಬ ಐದು ಜನ ಹೆಣ್ಣು ಮಕ್ಕಳು, ಒಟ್ಟು ೯ ಜನ ಮಕ್ಕಳು. ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯಿಂದ ಆಕರ್ಷಿತರು. ರಾಮಪ್ಪ ಕಂಕಣವಾಡಿಯವರ ಜೊತೆ ಯಾವಾಗಲೂ ಇರುತ್ತಿದ್ದರು. ಈ ಇಬ್ಬರು ಚಳುವಳಿಯ ಎಲ್ಲಾ ಚಟುವಟಿಕೆಗಳಲ್ಲಿ ಜೊತೆ–ಜೊತೆಯಾಗಿಯೆ ಭಾಗವಹಿಸಿದರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

೧೯೩೦ರಿಂದ ದೇಶ ಸ್ವಾತಂತ್ರ್ಯ ದೊರೆಯುವವರೆಗೂ ನಡೆದ ಎಲ್ಲಾ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಇವರು ಭಾಗವಹಿಸಿದ್ದರು. ಇವರು ರೇವಣ್ಣ ಬನಹಟ್ಟಿ, ವಾಸುದೇವ ನಾಯಿಕ, ಭೀಮರಾಯ ರಾಯಪ್ಪ ಕಂಕಣವಾಡಿ ಜೊತೆಗೂಡಿ ಚಳುವಳಿಯ ಕಾರ್ಯಮಾಡಿದರು.

೧೯೩೦ರ ಉಪ್ಪಿನ ಸತ್ಯಾಗ್ರಹದ ಶಿಬಿರಗಳಲ್ಲಿ ಇವರು ಹೆಸರನ್ನು ನೊಂದಾಯಿಸಿದ್ದರು. ಅಣ್ಣುಗುರೂಜಿ ಮತ್ತು ಗುರು ಮಾಸ್ತರ ಜೇರೆ ಯವರ ನೇತೃತ್ವದ ಪಥಕದಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು. ಬಾಗಿನಾಡಿನ ಸ್ವಾತಂತ್ರ್ಯ ಸಂಗ್ರಾಮದ

ಚರಿತ್ರೆಯಲ್ಲಿ ಉಪ್ಪಿನ ಸತ್ಯಾಗ್ರಹದ ಪ್ರಚಾರವನ್ನು ಕೈಕೊಂಡು ಅದನ್ನು ಯಶಸ್ವಿಯಾಗಿ ಪ್ರಚಾರಗೊಳಿಸಿದ ಬೆರಳೆಣಿಕೆಯಷ್ಟು ಹೋರಾಟಗಾರರಲ್ಲಿ ಇವರು ಒಬ್ಬರು.

“೧೯೩೭ರಲ್ಲಿ ಕಾಮ್ರೆಡ ಎಂ.ಎಸ್.ರಾಯ್ ಮತ್ತು ಪಂಡಿತ ಜವಾಹರಲಾಲ ನೆಹರು ಪಾಲ್ಗೊಂಡು ಗೋಕಾಕ ಸಭೆಯಲ್ಲಿ ಇವರು ಸ್ವಯಂಸೇವಕರಾಗಿದ್ದರು. ಇವರು ಯಾವಾಗಲೂ ನೆಹರೂ ಅವರ ಸುತ್ತಲೂ ಇದ್ದು ರಕ್ಷಣೆ ಮಾಡುತ್ತಿದ್ದರು”.[೨]

೧೯೩೭ರ ಡಿಸೆಂಬರ ತಿಂಗಳಿನಲ್ಲಿ ನೇತಾಜಿ ಸುಭಾಷಚಂದ್ರ ಬೋಸರು ಕರ್ನಾಟಕದಲ್ಲಿ ಪ್ರವಾಸ ಕೈಕೊಂಡು ಶೇಡಬಾಳ ರೇಲ್ವೆ ಸ್ಟೇಶನಗೆ ಆಗಮಿಸಿದ್ದರು. ನೇತಾಜಿಯವರ ಸೆಕ್ರೆಟರಿ ಖೊಡವಾಡದ ಗುಡಿ ಹತ್ತಿರವಿದ್ದ ಡೈರಿಯಲ್ಲಿ, ನೇತಾಜಿಯವರ ಉಗ್ರವಾದಿ ಹೋರಾಟಕ್ಕೆ ಬೆಂಬಲವನ್ನು ಸೂಚಿಸಿ, ರಕ್ತದಲ್ಲಿಯೇ ತಮ್ಮ ಸಹಿಯನ್ನು ಮಾಡಿದರು.

“೧೯೩೭ರ ಎಪ್ರಿಲ್ ಕೊನೆಯ ವಾರದಲ್ಲಿ ನಡೆದ ೧ ತಿಂಗಳ ಹುದಲಿಯ ಗಾಂಧೀ ಆಶ್ರಮದಲ್ಲಿ ಸೇರಿದ ೮೪ ಜನ ದೇಶದ ಪ್ರಮುಖರನ್ನು ನೋಡುವ, ಕೇಳುವ ಭಾಗ್ಯ ಸುತ್ತಮುತ್ತಲಿನ ಜನತೆಗೂ ಸ್ವಯಂಸೇವಕರಿಗೂ ಲಭ್ಯವಾಗಿತ್ತು. ಅವರಲ್ಲಿ ಹಿಡಕಲ್ಲದ ಭೀಮಪ್ಪ ಬಡಿಗೇರ ಮೇಸ್ತ್ರಿ ಸ್ವಯಂಸೇವಕರಾಗಿದ್ದರು”.[೩] ಹುದಲಿಯ ಅಖಿಲ ಭಾರತ ಗಾಂಧೀ ಸೇವಾ ಸಂಘದ ಸಮ್ಮೇಲನದಲ್ಲಿ ಇವರು ಅನೇಕ ವಿಧಾಯಕ ಕಾರ್ಯಗಳಲ್ಲಿ ಕಾರ್ಯ ನಿರ್ವಹಿಸಿದರು.

“೧೯೩೮ರಲ್ಲಿ ದಕ್ಷಿಣ ಭಾರತದಲ್ಲಿಯ ಸಂಸ್ಥಾನ ಪರಿಷತ್ತು ಕುಡಚಿಯಲ್ಲಿ ಸೇರಿತ್ತು. ಈ ಪರಿಷತ್ತಿಗೆ ಕೆ.ಎಸ್.ನಾರಿಮನ್ ಅಧ್ಯಕ್ಷರು, ಎ.ಬಿ.ಲಠ್ಠೆಯವರು ಮುಖ್ಯ ಅಥಿತಿಯಾಗಿ ಬಂದಿದ್ದರು. ಆ ಸಭೆಯಲ್ಲಿಯೂ ಸ್ವಯಂಸೇವಕರಾಗಿ ಭಾಗವಹಿಸಿದ್ದರು”.[೪]

೧೯೩೮ರಲ್ಲಿ ಇವರು, ಚಳುವಳಿಕಾರರ ಜೊತೆ ಗ್ರಾಮದ ಚಾವಡಿಯಲ್ಲಿ ಕುಳಿತು ಹೋರಾಟದ ಬಗ್ಗೆ ಚರ್ಚಿಸುತ್ತಿದ್ದರು. ಆಗ ನಾಲ್ಕು ಜನ ಪೊಲೀಸರೊಂದಿಗೆ ಬಂದ ಪೊಲೀಸ ಅಧಿಕಾರಿಯೊಬ್ಬರು ಇವರನ್ನು ಬಂಧಿಸಿ ಕುಡಚಿ ಠಾಣೆಗೆ ಒಯ್ದು, ಬೆಳಗಾವಿ ಜೇಲಿಗೆ ವರ್ಗಾಯಿಸಿದರು. ೬ ತಿಂಗಳ ನಂತರ ಜೇಲಿನಿಂದ ಇವರು ಬಿಡುಗಡೆಗೊಂಡರು.

“೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಲು ಹಿಡಕಲ್‌ದ ಭೀಮಪ್ಪ ಬಡಿಗೇರ ಇವರಿಗೆ ಒಪ್ಪಿಗೆ ದೊರೆತ್ತಿತ್ತು”.[೫] ಗ್ರಾಮದ ಇತರರ ಜೊತೆಗೂಡಿ ಅನೇಕ ವಿಧಾಯಕ ಕಾರ್ಯಗಳಲ್ಲಿ ಇವರು ಭಾವಗಹಿಸಿದ್ದರು. ಇವರು ಗ್ರಾಮದಲ್ಲಿನ ಹಳೆಯ ಕಾಂಗ್ರೆಸ್ಸ ಕಮೀಟಿಯ ಕಾರ್ಯಕರ್ತರಾಗಿದ್ದರು. “ಇಮಾಮಸಾಹೇಬ ಮುಲ್ಲಾ, ನಿಂಗಪ್ಪ ಅಂಟಿನರ

ಜೊತೆಗೂಡಿ ಭೂಗತರಾಗಿ ಚಳುವಳಿ ಕಾರ್ಯದಲ್ಲಿ ತೊಡಗಿದ್ದರು. ಈ ಹಿಂದೆಯೂ ವಿಧ್ವಂಸಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದನೆಂಬ ಕಾರಣಕ್ಕೆ ಇವರಿಗೆ ಜೇಲು ವಾಸವಾಗಿತ್ತು".[೬]

೧೯೪೨ರ ಅಗಸ್ಟ ಮತ್ತು ಸಪ್ಟೆಂಬರ ತಿಂಗಳಲ್ಲಿ, ಅಥಣಿಯ ಅನಂತ ಕುಲಕರ್ಣಿಯವರು, ಮಧ್ವರಾಜ ದೇಶಪಾಂಡೆಯವರ ಮನೆಯಲ್ಲಿ ನಡೆಸಿದ ಗುಪ್ತ ಸಭೆಗಳಲ್ಲಿ ಇವರು ಭಾಗವಹಿಸಿದ್ದರು.

ಗ್ರಾಮದ ತರುಣರ ಪಡೆಯು, ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ ಯೋಜನೆಯನ್ನು ರೂಪಿಸಿದಾಗ, ಆ ತಂಡದಲ್ಲಿದ್ದರು. ಕುಡಚಿ–ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ ಕಾರ್ಯದಲ್ಲಿ ಭಾಗವಹಿಸಿದ್ದರು. ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ ಯೋಜನೆಯಲ್ಲಿ ತಂಡದಲ್ಲಿ ಪಾಲ್ಗೊಂಡಿದ್ದರು. ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೆ ಸ್ಟೇಷನ ಸುಡುವ ಕಾರ್ಯದಲ್ಲಿ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೇ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

"ಇವರು, ೧೯೪೨ರ ಅಕ್ಟೋಬರ ತಿಂಗಳಲ್ಲಿ ಇಮಾಮಸಾಹೇಬ ಮುಲ್ಲಾರ ನೇತೃತ್ವದ ತಂಡ, ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ಯೊಜನೆ ಹಾಕಿಕೊಂಡಾಗ, ಸಿದ್ದಾ ಒಡೆಯರ ಉಪದೇಶಕ್ಕೆ ಒಳಗಾಗಿ ಹೇಗೋ ಅವರ ಸಂಗಡ ಹೋಗದೇ ಹಿಂದೆ ಉಳಿದನು."[೭] ಭೂಗತರಾಗಿಯೇ ಉಳಿದುಕೊಂಡ ಇವರು ಹಲವಾರು ಚಟುವಟಿಕೆಗಳಲ್ಲಿ ಪಾಲ್ಗೊಂಡು, ಸ್ವಾತಂತ್ರ್ಯಾ ನಂತರವೇ ಪ್ರಕಟಗೊಂಡರು.

**ಕೊನೆಯ ದಿನಗಳು :**

ಸ್ವಾತಂತ್ರ್ಯ ನಂತರವು ಇವರು ಸ್ವಾಭಿಮಾನದ ಬದುಕನ್ನೇ ಸಾಗಿಸಿದರು. ಎಂತಹ ಕಷ್ಟದಲ್ಲೂ ಇತರರಿಂದ ಸಹಾಯ ಬಯಸಿದವರಲ್ಲ. ಸ್ವಾತಂತ್ರ್ಯ ನಂತರದಲ್ಲಿ ಸ್ವಾತಂತ್ರ್ಯ ಹೋರಾಟಗಾರರಿಗೆ ದೊರೆಯುವ ಪಿಂಚಣಿಗಾಗಿ ಅರ್ಜಿ ಹಾಕಲು ಅಸೆಪಟ್ಟವರಲ್ಲ. ಸ್ವಾತಂತ್ರ್ಯ ಪಡೆಯಲು ಪ್ರಾಣತ್ಯಾಗಕ್ಕೂ ಸಿದ್ದನಿದ್ದ ಹಳ್ಳಿಗಾಡಿನ ನಿಷ್ಠಾವಂತ, ಅಪ್ಪಟ ದೇಶಾಭಿಮಾನಿ ಯೋಧನನ್ನು ಚರಿತ್ರೆಯ ಪುಟಗಳಲ್ಲಿ ದಾಖಲಿಸದಿದ್ದರೆ, ನಾವು ಚರಿತ್ರೆಗೆ ಅನ್ಯಾಯ ಬಗೆದಂತೆಯೇ ಸರಿ. ಸು ಕ್ರಿ.ಶ. ೧೯೬೦ರ ದಶಕದಲ್ಲಿ ನಿದನ ಹೊಂದಿದರು.

## ೨.೩. ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ

**ಜನನ :**

ತಂದೆ ಹುಸೇನಸಾಹೇಬ. ತಾಯಿ ಮಾಸಾಹೇಬ. ಈ ದಂಪತಿಗಳಿಗೆ ಜೈತುನಬೀ, ಇಮಾಮಸಾಹೇಬ, ಅಪ್ಪಾಲಾಲ, ಮೀರಾಸಾಹೇಬ, ಮೌಲಾಬಕ್ಷೀ, ಭೂಮಾಬೀ ಹೀಗೆ ನಾಲ್ಕು ಜನ ಗಂಡು ಮತ್ತು ಎರಡು ಜನ ಹೆಣ್ಣು ಮಕ್ಕಳು. ಇವರಲ್ಲಿ ಎರಡನೆಯ ಮಗನೇ ಇಮಾಮಸಾಹೇಬ. ಕ್ರಿ.ಶ ೧೯೦೫ರಲ್ಲಿ ಹಿಡಕಲ್ಲದಲ್ಲಿ ಇವರ ಜನನವಾಯಿತು.

**ಮನೆತನದ ಹಿನ್ನೆಲೆ :**

ಮುಲ್ಲಾ ಅವರದು ಗ್ರಾಮದಲ್ಲಿರುವ ಏಕೈಕ ಮುಸ್ಲಿಂ ಕುಟುಂಬ. ತಂದೆ ಹುಸೇನಸಾಹೇಬರು ಮೂಲತಃ ಎಲ್ಲಿಂದ ಬಂದರು ಎಂಬುದು ತಿಳಿದಿಲ್ಲ. ಬಹುಶಃ ಗೋಕಾಕ ತಾಲೂಕಿನ ಅಕ್ಕತಂಗೆರಹಳ್ಳ ಅಥವಾ ಅಥಣಿ ತಾಲೂಕಿನ ಖವಟಕೊಪ್ಪದಿಂದ ಬಂದಿರಬಹುದೆಂದು ಇವರ ಮನೆಯವರು ಹೇಳುತ್ತಾರೆ. ಆದರೆ ಇವರು ಬಾಲ್ಯದಿಂದಲೂ ಹಿಡಕಲ್ಲ ಗ್ರಾಮದ ನಿವಾಸಿಗಳಾಗಿದ್ದರು.

ಇವರ ವಿವಾಹವು ಕ್ರಿ.ಶ. ೧೯೨೩ರಲ್ಲಿ ಅಥಣಿ ತಾಲೂಕಿನ ಖವಟಕೊಪ್ಪ ಗ್ರಾಮದ ಮಹಮ್ಮದಸಾಹೇಬರ ಮಗಳಾದ ನನ್ನಿಮಾಬೀಯವರ ಜೊತೆ ಆಯಿತು. ಜಹೀರಾಬೀ, ರೋಷನಬೀ, ಹುಸೇನಸಾಬ ಉರ್ಫ ಬಾಬು, ಜುಬೇದಾಬೀ, ನೂರಜಹಾನ, ಅಜ್ಮತಬೀ, ಐದು ಹೆಣ್ಣು ಮತ್ತು ಒಂದು ಗಂಡು ಒಟ್ಟು ಆರು ಜನ ಮಕ್ಕಳು.

**ಶಿಕ್ಷಣ ಮತ್ತು ಕಾಯಕ :**

ಬಾಲ್ಯಜೀವನವನ್ನು ಗ್ರಾಮದಲ್ಲಿಯೇ ಕಳೆದ ಇವರು ನಾಲ್ಕನೇಯ ತರಗತಿಯವರೆಗೆ ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡಿದ್ದರು. ಬಹುಭಾಷಾ ವಿಶಾರದರಾದ ಇವರು ಕನ್ನಡ, ಮರಾಠಿ, ಮೋಡಿ, ಇಂಗ್ಲೀಷ, ಉರ್ದು ಭಾಷೆಗಳಲ್ಲಿ ಪರಿಣಿತರಾಗಿದ್ದರು. ಇವರು ಪ್ರತಿ ಕಾಯಕದಲ್ಲೂ ನಿಷ್ಠೆಯನ್ನು ಹೊಂದಿದ್ದರು. ಕೃಷಿ ಭೂಮಿಗಳಲ್ಲಿ, ಕೂಲಿ ಉದ್ಯೋಗದಲ್ಲಿ ನಿರತರಾದ ಇವರು ಕೃಷಿಯತ್ತ ಹೆಚ್ಚಿನ ಒಲವನ್ನು ಹೊಂದಿದ್ದರು. ಇವರಿಗೆ ಚಿಕ್ಕ ವಯಸ್ಸಿನಿಂದಲೂ ರಾಜಕೀಯದತ್ತ ವಿಶೇಷ ಆಸಕ್ತಿ ಇತ್ತು. ಅವರಲ್ಲಿ ಮತೀಯ ಭಾವನೆಗಳಿಗೆ ಅವಕಾಶವಿರಲಿಲ್ಲ. ಸಾಮರಸ್ಯತೆ, ಭಾವಕ್ಯತೆ ಎದ್ದು ಕಾಣುತ್ತಿತ್ತು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಸ್ವಾತಂತ್ರ್ಯ ಚಳುವಳಿಯ ಹುಚ್ಚು ಎಲ್ಲೆಡೆ ಹಬ್ಬಿದಂತೆ ಮುಲ್ಲಾ ಮನೆತನದವರಿಗೂ ಆ ಗೀಳು ಅಂಟಿಕೊಂಡಿತು. ಇವರ ತಾಯಿ ಮಾಸಾಹೇಬಾ, ಸ್ವಾತಂತ್ರ್ಯ

ಚಳುವಳಿಯತ್ತ ವಿಶೇಷ ಒಲವನ್ನು ಹೊಂದಿದ್ದು, ಮಕ್ಕಳಾದ ಇಮಾಮಸಾಹೇಬ ಮತ್ತು ಮೌಲಾಲಿ ಭಕ್ಷೀ ರಲ್ಲಿ ಸ್ವಾತಂತ್ರ್ಯ ಚಳುವಳಿಯ ಕಲ್ಪನೆಯನ್ನು ತುಂಬಿದರು.

ಇವರ ಮೊದಲು ಹೋರಾಟ ಆರಂಭಿಸಿದ್ದು ಶಂಕರಹಟ್ಟಿ ಗ್ರಾಮದಿಂದ. ಮಹಾದೇವಪ್ಪ ಪತ್ತಾರ, ರಾಜಾಸಾಹೇಬ ನದಾಫರ ಜೊತೆಗೂಡಿ ಆರಂಭಿಕ ಚಳುವಳಿಯನ್ನು ಮಾಡಿದರು. ಮಹಿಷವಾಡಿಗೆಯ, ಗೆಳೆಯ ಬನಪ್ಪ ಸಿದ್ದಪ್ಪ ಅಜ್ಜಪ್ಪಗೋಳ ಕೂಡ ಇವರನ್ನು ಹೋರಾಟದ ಚಳುವಳಿಗೆ ಪ್ರೇರೇಪಿಸಿದರು. ಇವರು ಸುಭಾಷ ಚಂದ್ರರ ಉಗ್ರವಾದದಿಂದ ಪ್ರಭಾವಿತರಾಗಿದ್ದರೂ ಕೂಡ ಗಾಂಧೀಜಿಯವರ ಕಟ್ಟಾ ಅನುಯಾಯಿಗಳಾಗಿದ್ದರು. ಇವರದು ಮೈನಿವಿರೇಳುವ ಭಾಷಣ.

“೧೯೩೦ರಿಂದಲೂ ಬೆಳಗಾವಿ ಜಿಲ್ಲೆಯಲ್ಲಿ ಬೆಳೆದ ರಾಷ್ಟ್ರೀಯ ಚಟುವಟಿಕೆಗಳಿಂದ ಪ್ರಭಾವಿತನಾಗಿ ಕಾಂಗ್ರೇಸ್ಸಿನಲ್ಲಿ ದುಡಿಯುತ್ತ ಇದ್ದೆನು.” [೮] ಎಂದು ಹೇಳುತ್ತಾರೆ. ೧೯೩೦ರಲ್ಲಿ ಅಣ್ಣುಗುರೂಜಿ ಮತ್ತು ಗುರು ಮಾಸ್ತರ ಜೇರೆಯವರ ನೇತೃತ್ವದ ಉಪ್ಪಿನ ಸತ್ಯಾಗ್ರಹದ ಪ್ರಚಾರ ಪಥಕ ಗ್ರಾಮಕ್ಕೆ ಬಂದಾಗ ಸಕ್ರೀಯವಾಗಿ ಭಾಗವಹಿಸಿ ತಾಲೂಕಿನಲ್ಲೆಲ್ಲಾ ಪ್ರಚಾರ ಮಾಡಿದರು. ೧೯೩೭ರಲ್ಲಿ ಕಾಮ್ರೆಡ ಎಂ. ಎಸ್. ರಾಯ್. ಮತ್ತು ಪಂಡಿತ ಜವಹಾರಲಾಲ ನೆಹರು, ಕರ್ನಾಟಕದಲ್ಲಿ ಪ್ರವಾಸ ಕೈಕೊಂಡು, ಗೋಕಾಕ್ಕೆ ಭೇಟ್ಟಿ ಇತ್ತಾಗ ನಡೆದ ಸಭೆಯಲ್ಲಿ, ಸ್ವಯಂ ಸೇವಕರಾಗಿ ಕಾರ್ಯ ನಿರ್ವಹಿಸಿದರು.

ಹುದಲಿಯಲ್ಲಿ ನಡೆದ ೧೯೩೭ರ ಎಪ್ರಿಲ್ ೧೭ರ ಅಖಿಲ ಭಾರತ ಗಾಂಧೀ ಸೇವಾ ಸಂಘದ ಸಮ್ಮೇಲನದಲ್ಲಿ ನಡೆದ ವಿಧಾಯಕ ಕಾರ್ಯಕ್ರಮಗಳಲ್ಲಿ, ಇವರು ಸ್ವಯಂಸೇವಕರಾಗಿ ಕಾರ್ಯನಿರ್ವಹಿಸಿದರು.

೧೯೩೮ರಲ್ಲಿ ದಕ್ಷಿಣ ಭಾರತದಲ್ಲಿಯ ಸಂಸ್ಥಾನ ಪರಿಷತ್ತು ಕುಡಚಿಯಲ್ಲಿ ಸಭೆಸೇರಿದ್ದಾ್ಗ ಇವರು ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸಿದ್ದರು. ೧೯೩೮ರಲ್ಲಿ ಗ್ರಾಮದ ಚಾವಡಿಯಲ್ಲಿ ನಾಲ್ಕು ಜನ ಕೂಡಿ ಸ್ವಾತಂತ್ರ್ಯ ಸಂಗ್ರಾಮದ ಕುರಿತು ಚರ್ಚಿಸುತ್ತಿದ್ದಾಗ ಪೊಲೀಸರು ಇವರನ್ನು ಬಂಧಿಸಿದರು.

“೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಲು ಹಿಡಕಲ್‌ದ ಇಮಾಮಸಾಹೇಬ ಮುಲ್ಲಾ ಇವರಿಗೆ ಒಪ್ಪಿಗೆ ದೊರೆತ್ತಿತ್ತು”.[೯] ಗ್ರಾಮದಲ್ಲಿ ಮಟ್ಟದಲ್ಲಿ ಕಾಂಗ್ರೇಸ ಪಕ್ಷವನ್ನು ಸ್ಥಾಪಿಸಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು.

“೧೯೪೦ರಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿದಕ್ಕೆ ನನಗೆ ನಾಲ್ಕು ತಿಂಗಳ ಶಿಕ್ಷೆಯಾಗಿತ್ತು. ಬಿಡುಗಡೆಯನಂತರ ೧೯೪೨ರ ಚಳುವಳಿ ಆರಂಭ ಆದಾಗಲೂ ಅದರಲ್ಲಿ

ಸಕ್ರಿಯವಾಗಿ ಭಾಗವಹಿಸಿ ಅನೇಕ ವಿಧ್ವಂಸಕ ಕೃತ್ಯಗಳಲ್ಲಿ ಪಾಲುಗೊಂಡೆ. ಮುಂಬೈಯ ಆಗಸ್ಟ್ ಏ.ಐ.ಸಿ.ಸಿ.ಗೂ ನಾನು ಹೋಗಿದ್ದೆ. ಚಲವಳಿ ಕಾಲಕ್ಕೆ ದಿ॥ ವಾಮನರಾವ್ ಬಿದರಿ ನನಗೆ ಮಾರ್ಗದರ್ಶಕರಾಗಿದ್ದರು. ಸ್ಟೇಶನ್ ಸುಡುವುದು, ಟಲಿಫೋನ್ ತಂತಿಯನ್ನು ಕತ್ತರಿಸುವುದು, ರೆವಿನ್ಯೂ ದಪ್ತರ ಸುಡುವುದು ಮುಂತಾದ ಚಟುವಟಿಕೆಗಳನ್ನು ನೆರೆಯ ಊರುಗಳ ಕಾರ್ಯಕರ್ತರ ಜೊತೆ ಸೇರಿ ಮಾಡುವುದರ ಜೊತೆ ಬುಲೆಟಿನ್ ವಗೈರೆ ಊರೂರಿಗೆ ಹಂಚುತ್ತಿದ್ದೆ".[೧೦] ಎಂದು ಬರೆದಿದ್ದದ್ದಾರೆ.

೧೯೪೨ರ ಅಗಸ್ಟ್ ಮತ್ತು ಸಪ್ಟೆಂಬರ ತಿಂಗಳಲ್ಲಿ, ಅಥಣಿಯ ಅನಂತ ಶಾಮರಾವ ಕುಲಕರ್ಣಿಯವರು ಮಧ್ವರಾಜ ದೇಶಪಾಂಡೆಯವರ ಮನೆಯಲ್ಲಿ ನಡೆಸಿದ ಗುಪ್ತ ಸಭೆಗಳಲ್ಲಿ ಇವರು ಭಾಗವಹಿಸಿದ್ದರು. ಇವರು ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ, ಕುಡಚಿ-ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ, ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ, ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೇ ಸ್ಟೇಷನ ಸುಡುವ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೇ ಸ್ಟೇಷನ ಸುಡುವ, ಗ್ರಾಮದ ತರುಣ ಹೋರಾಟಗಾರರ ತಂಡದಲ್ಲಿ ಭಾಗವಹಿಸಿದ್ದರು.

ತಮ್ಮ ನೇತೃತ್ವದಲ್ಲಿಯೇ ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ಯೋಜನೆ ರೂಪಿಸಿದರು. "ಅಕ್ಟೋಬರ್ ೨, ಗಾಂಧೀ ಜಯಂತಿಯನ್ನು ಸಾವಳಿಗೆ ಊರಲ್ಲಿ ಆಚರಿಸಿ ನಾವು ೧೪ ಜನ ಅಥಣಿಗೆ ಹೊರಟೆವು. ಕೊಕಟನೂರಿವನನೊಬ್ಬನು ನಮ್ಮ ವಿಚಾರ ತಿಳಿದು ಅಥಣಿಗೆ ಹೋಗಿ ಪೋಲೀಸರಿಗೆ ಮೊದಲೇ ತಿಳಿಸಿದನು. ಅಥಣಿ ಬಸ್‌ಸ್ಟಾಂಡ್‌ನಲ್ಲೇ ೬೦ ಮಂದಿ ಸಶಸ್ತ್ರ ಪೋಲೀಸರ ಪಾರ್ಟಿ ಬಂದು ನಮ್ಮನ್ನು ಹಿಡಿದರು. ಆಗ ನಮ್ಮಲ್ಲಿ ಕೆಲವು ವಿಧ್ವಂಸಕ ಸಾಮಾನುಗಳಿದ್ದು ಅವನ್ನೆಲ್ಲ ಜಪ್ತ ಮಾಡಿ ನನ್ನನ್ನೂ ನನ್ನ ಜೊತೆ ಇದ್ದ ತಮ್ಮಂದಿರನ್ನೂ ಬಹಳ ಹೊಡೆದರಲ್ಲದೆ ೨೮ ದಿನ ರಿಮಾಂಡನಲ್ಲಿ ಇಟ್ಟು ಹಿಂಸೆ ಕೊಟ್ಟರು. ನನ್ನ ಊರಾದ ಹಿಡಕಲ್ಲಿಗೆ ಹೋಗಿ ನನ್ನ ತಾಯಿಯವರಿಗೆ ಹೂಡ ಬಹಳ ಹೊಡೆದರು.

ಮುಂದೆ ನಮ್ಮನ್ನು ಬೆಳಗಾವಿ ಸೆಂಟ್ರಲ್ ಜೈಲಿಗೆ ಒಯ್ದು ಅಲ್ಲಿ ಅಂಡರ್-ಟ್ರಾಯಲ್ ಅಂತ ೬-೭ ತಿಂಗಳು ಇಟ್ಟು ಕಡೆಗೆ ನನಗೆ ಏಳೂವರೆ ವರ್ಷ ಶಿಕ್ಷೆವಿಧಿಸಿದರು".[೧೧] ನಂತರ ಇವರನ್ನು ಗುಜರಾತದ ವಿಸಾಪೂರಕ್ಕೆ ವರ್ಗಾಯಿಸಿ, ಎರಡರಿಂದ ಮೂರ ವರ್ಷ ಜೈಲಿನಲ್ಲಿ ಇಡಲಾಯಿತು. ಪೂನಾ ಸಮೀಪ ಯರವಡಾ ಜೈಲಿಗೆ ವರ್ಗಾಯಿಸಲಾಯಿತು. ಯರವಡಾ ಜೈಲಿನಲ್ಲಿದ್ದಾಗ ಮೊರಾರ್ಜಿ ದೇಸಾಯಿ ಅವರ ಸಂಪರ್ಕವಾಯಿತು. ಯರವಾಡ ಸೆರೆವಾಸದ ನಂತರ ಇವರನ್ನು ಬೆಳಗಾವಿಯ ಹಿಂಡಲಗಾ ಜೈಲಿಗೆ ಕರೆತರಲಾಯಿತು. "ಸ್ವಾತಂತ್ರ್ಯ ಬರುವ ಮೊದಲೇ ನನ್ನ ಬಿಡುಗಡೆ ಆಯಿತು".[೧೨]

**ಸ್ವಾತಂತ್ರ್ಯಾ ನಂತರದ ಸಾಮಾಜಿಕ ಚಟುವಟಿಕೆಗಳು :**

ಸ್ವಾತಂತ್ರ್ಯಾ ನಂತರದಲ್ಲಿ ಇವರು ಕೃಷಿ ಚಟುವಟಿಕೆಗಳಲ್ಲಿ ಭಾಗವಹಿಸಿದರು. ೧೯೬೦ರ ವೇಳೆಯಲ್ಲಿ ಬೆಳಗಾವಿ ಜಿಲ್ಲಾ ಗೋಡಾವನ ಸುಪರಿಟೆಂಡೆಂಟ ಆಗಿ ಒಂದು ವರ್ಷ ಸೇವೆ ಮಾಡಿದರು. ೧೯೬೨-೬೩ರಲ್ಲಿ ನಡೆದ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಆಯ್ಕೆಯಾಗಿ ಗ್ರಾಮ ಪಂಚಾಯತಿಯ ಉಪಾಧ್ಯಕ್ಷರಾಗಿ ಜನಸೇವೆ ಮಾಡಿದರು.

ಕಾಂಗ್ರೇಸನ ನಿಷ್ಠಾವಂತ ಕಾರ್ಯಕರ್ತರು. ಅಖಿಲ ಭಾತರ ಕಾಂಗ್ರೇಸ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾದ ಇವರು ಖಾಧಿ ದಾರಿಗಳಾಗಿದ್ದರು. ಕಾಂಗ್ರೇಸ ಅವರ ಜೀನವನವಾಗಿತ್ತು. ಅವರ ನಡೆನುಡಿಗಳಲ್ಲಿ ಕಾಂಗ್ರೇಸ ತತ್ವ ಎದ್ದು ಕಾಣುತ್ತಿತ್ತು. ಇವರ ಹೋರಾಟದ ಸೇವೆಯನ್ನು ಗುರುತಿಸಿದ ಭಾರತ ಸರ್ಕಾರ ಇವರಿಗೆ ತಾಮ್ರ ಪತ್ರವನ್ನು ನೀಡಿ ಗೌರವಿಸುವ ಕಾರ್ಯಕ್ರಮ ಆಯೋಜಿಸಿತು.

ಭಾರತ ಸರ್ಕಾರವು ೧೨೦೦ ಜನ ಸ್ವಾತಂತ್ರ್ಯ ಹೋರಾಟಗಾರರಿಗೆ ಆಹ್ವಾನ ನೀಡಿತು. ಕರ್ನಾಟಕದಿಂದ ಆಯ್ಕೆಯಾದವರು ೩೬ ಜನ. ಬೆಳಗಾವಿ ಜಿಲ್ಲೆಯಿಂದ ಆಯ್ಕೆಯಾದ ಏಕೈಕ ಮುಸ್ಲಿಂ ಸಮುದಾಯದ ಹೋರಾಟಗಾರ ಇವರಾಗಿದ್ದುದು ಅವರ ಹೋರಾಟದ ಪ್ರಖರತೆಯನ್ನು ಬಿಂಬಿಸುತ್ತದೆ.

೧೯೭೨ರಲ್ಲಿ ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಮತ್ತು ಬೆಳಗಾವಿ ಜಿಲ್ಲಾ ದಂಡಾಧಿಕಾರಿಗಳು ಖುದ್ದಾಗಿ ಹಿಡಕಲ್ಲ ಗ್ರಾಮಕ್ಕೆ ಆಗಮಿಸಿ ಇವರನ್ನು, ಅಗಸ್ಟ ೧, ೧೯೭೨ರಂದು, ಬೆಂಗಳೂರು; ಮದ್ರಾಸ, ಮೂಲಕ ದೆಹಲಿಗೆ ತಲುಪಿಸಿದರು.

ಇವರು ೧೯೭೨ರ ಅಗಸ್ಟ ೧೫ರಂದು ಸ್ವಾತಂತ್ರ್ಯಯೋಧರ ಸನ್ಮಾನ ಕಾರ್ಯಕ್ರಮದಲ್ಲಿ ಪಾಲ್ಗೊಂಡು, ರಾಷ್ಟ್ರಪತಿ ವ್ಹಿ. ವ್ಹಿ. ಗಿರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ, ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧೀಯವರಿಂದ ತಾಮ್ರ ಪತ್ರವನ್ನು ಪಡೆದು ಸನ್ಮಾನಿತರಾದರು. ದಿಲ್ಲಿಯಲ್ಲಿದ್ದಾಗ ಕೇಂದ್ರ ಸರಕಾರದ ಸಚಿವರಾದ ಕೆ.ಸಿ.ಪಂತರು, ತಾವು ಮಂತ್ರಿಗಳೆಂಬ ಭಾವನೆ ಮರೆತು ಇವರ ಹೆಗಲ ಮೇಲೆ ಕೈ ಹಾಕಿ ಮಾತನಾಡಿಸಿದರು.

**ಮತೀಯ ಗಲಭೆ :**

೧೯೪೭ರಲ್ಲಿ ಭಾರತವು ಮತೀಯ ಆಧಾರದ ಮೇಲೆ ಭಾರತ ಮತ್ತು ಪಾಕಿಸ್ತಾನವಾಗಿ ವಿಭಜನೆಯಾದಾಗ ಅದರ ಕರಿನೆರಳು ಗ್ರಾಮದ ಏಕೈಕ ಮುಸ್ಲಿಂ ಕುಟುಂಬವಾದ ಇವರ ಮನೆಯ ಮೇಲೂ ಬಿತ್ತು. ಕಿಡಿಗೇಡಿಗಳು ಮನೆ ಬಾಗಿಲಗೆ ಎಚ್ಚರಿಕೆ ಪತ್ರವನ್ನು ಕೂಡ ಅಂಟಿಸಿ ಹೋದರು. ಹಿಂದೂ ಬಾಂಧವರ ಜೊತೆ ಅವಿನಾಭಾವ ಸಂಬಂಧ ಹೊಂದಿದ್ದ ಇವರಿಗೆ, ಅದು ಸಮಸ್ಯೆಯೇ ಆಗಲಿಲ್ಲ. ಮುಖಂಡರಾದ ರಾಮಪ್ಪ ಕಂಕಣವಾಡಿ,

ಭೀಮರಾಯ ಕಂಕಣವಾಡಿ, ಸಿದ್ರಾಮ ಗಲಗಲಿ, ಶಿವಲಿಂಗಪ್ಪ ಬನಹಟ್ಟಿ, ಭೀಮಪ್ಪ ಬಡಿಗೇರ ಮತ್ತು ಇತರರು ಇವರ ಮನೆಗೆ ಬಂದು ಸ್ವತಃ ತಾವೇ ನಿಂತು ಸೂಕ್ತ ರಕ್ಷಣೆ ಕೊಟ್ಟರು.

**ಬ್ರಾಹ್ಮಣ ದೇಶಪಾಂಡೆ ಮನೆತನದ ರಕ್ಷಣೆ :**

ಮಹಾತ್ಮಾ ಗಾಂಧೀಜಿಯವರ ನಿಧನದ ನಂತರ ಗ್ರಾಮದ ಬ್ರಾಹ್ಮಣ ದೇಶಪಾಂಡೆ ಮನೆತನದ ಮೇಲೆ ದಾಳಿ ಮಾಡಲು ನೆರೆಯ ಗ್ರಾಮದಿಂದ ಜನರು ಬಂದಾಗ, ಮುಖಂಡರಾದ ರಾಮಪ್ಪ ಕಂಕಣವಾಡಿ ಜೊತೆಗೂಡಿದ ಇವರು, ಅವರನ್ನು ಗ್ರಾಮದ ಹೊರಗೆ ಇರುವ ಪತ್ರೈಪ್ಪನ ಮಠದ ಹತ್ತಿರ ನಿಲ್ಲಿಸಿ, ಗ್ರಾಮ ಪ್ರವೇಶಿಸಲು ಅವಕಾಶ ಕೊಡದೆ ಬ್ರಾಹ್ಮಣ ಮನೆತನದ ಮೇಲಿನ ಸಂಭವನೀಯ ದಾಳಿಯನ್ನು ತಡೆಗಟ್ಟಿದರು.

**ಪ್ರಾಮಾಣಿಕತೆ ಮತ್ತು ಪಾರದರ್ಶಕತೆ :**

ಹಣಕ್ಕಾಗಿ, ಭೂಮಿಗಾಗಿ ಎಂದು ಅವರು ತಾವು ನಂಬಿದ ತತ್ವಗಳಿಗೆ ತಿಲಾಂಜಲಿ ಇಟ್ಟವರಲ್ಲ. ಇವರು ಉಳಿಮೆ ಮಾಡುತ್ತಿದ್ದ ಜಮೀನು ಟೆನನ್ಸಿ ಕಾಯ್ದೆಯಲ್ಲಿ ದೊರೆತಾಗ ಅದನ್ನು ಬಯಸದೆ ಜಮೀನು ಮಾಲೀಕರಿಗೆ ಹಿಂದಿರುಗಿಸಿ ತಮ್ಮ ಪ್ರಾಮಾಣಿಕತೆಯನ್ನು ಮೆರೆದರು. ೧೯೬೭ರಲ್ಲಿ ಮಗನಾದ ಹುಸೇನಸಾಹೇಬರು ಗ್ರಾಮಪಂಚಾಯತಿ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದಾಗ ೨೬೦/-ರೂಗಳ ಅವ್ಯವಹಾರದ ಬಗ್ಗೆ ಗ್ರಾಮಸ್ಥರು ಆರೋಪ ಮಾಡಿದಾಗ, ತೀವ್ರ ಕಳವಳಗೊಂಡು, ವ್ಯವಹಾರದಲ್ಲಿ ಕೊರತೆ ಕಂಡು ಬಂದ ಹಣವನ್ನು ತುಂಬಿ ಆರೋಪದಿಂದ ಮಗನನ್ನು ಮುಕ್ತಗೊಳಿಸಿದರು. ಅಲ್ಲದೇ ಸದರೀ ನೌಕರಿಯಿಂದ ಅವರನ್ನು ತೆಗೆದು ಪಾರದರ್ಶಕತೆಗೆ ಹೆಸರಾದರು.

ಗ್ರಾಮದ ಪೂರ್ವಕ್ಕಿರುವ ನೂರಾರು ಎಕರೆ ಜಮೀನನ್ನು ರೈತರಿಗೆ ಟೆನೆನ್ಸಿ ಕಾಯ್ದೆಯಡಿಯಲ್ಲಿ ನೀಡಲು, ಹಣಗಂಡಿ ದೇಸಾಯಿಯವರು ನಿರಾಕರಿಸಿದಾಗ, ರೈತರ ಪರವಾಗಿ ಹೋರಾಟ ಮಾಡಿ ಸಫಲತೆ ಕಂಡರು.

ಇವರು ತಮ್ಮ ಜೀವಿತದವರೆಗೆ ಸರ್ಕಾರದ ಪಿಂಚಣಿ ಪಡೆದರು. ನಂತರ ಇವರ ಧರ್ಮಪತ್ನಿಯವರು, ಜೀವಿತದವರೆಗೆ ಪಿಂಚಣಿ ಸೌಲಭ್ಯವನ್ನು ಪಡೆದುಕೊಂಡರು.

**ಕೊನೆಯ ದಿನಗಳು :**

ಇಮಾಮಸಾಹೇಬರು ೧೯೭೮ರಲ್ಲಿ ಚರ್ಮ ರೋಗಕ್ಕೆ ತುತ್ತಾಗಿ ಅನಾರೋಗ್ಯಕ್ಕೆ ಒಳಗಾದರು. ಎರಡು-ಮೂರು ವರ್ಷಗಳಲ್ಲಿ ಚರ್ಮ ರೋಗದಿಂದ ಗುಣಮುಖರಾದರೂ ಕೂಡ ವೃದ್ಧಾಪ್ಯದಿಂದ, ೧೯೮೩ರ ನವ್ಹೆಂಬರ ೭ ರಂದು ಸೋಮವಾರ ಮುಂಜಾನೆ ೧೦ ಗಂಟೆಗೆ ಇವರು ನಿಧನರಾದರು.

## ೨.೪. ಲಕ್ಷ್ಮಣ ಅಣ್ಣಪ್ಪ ಡಾಂಗೆ

**ಜನನ :**

ಇಟನಾಳ ಗ್ರಾಮದ ಅಣ್ಣಪ್ಪ ಮತ್ತು ಕಾಶೆವ್ವ ದಂಪತಿಗಳಿಗೆ ಅವಳಿ-ಜವಳಿ ಮಕ್ಕಳು. ಅವರು ರಾಮ ಮತ್ತು ಲಕ್ಷ್ಮಣ. ಇವರು ಇಟನಾಳದಲ್ಲಿ ೦೬-೦೯-೧೯೨೭ರಲ್ಲಿ ಜನಿಸಿದರು. ಅವಳಿಗಳಲ್ಲಿ ಲಕ್ಷ್ಮಣ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಟಗಾರರಾಗಿ ಕೆಲಸ ಮಾಡಿದರು.

**ಶಿಕ್ಷಣ :**

ಇಟನಾಳ ಕುಂದರವಾಡ ಸಂಸ್ಥಾನದಲ್ಲಿದ್ದರಿಂದ ಹರಕು-ಮುರುಕು ಮರಾಠಿ ಶಾಲೆಯನ್ನು ಹೊಂದಿತ್ತು. ಇವರು ಆರಂಭದ ಪ್ರಾಥಮಿಕ ಶಿಕ್ಷಣವನ್ನು ಮರಾಠಿಯಲ್ಲಿಯೇ ಪಡೆದುಕೊಂಡರು. ನಂತರ ೧೯೩೮ರಲ್ಲಿ ಅಥಣಿ ತಾಲೂಕಿನ ಹಿಡಕಲ್ಲ ಗ್ರಾಮದ ಕನ್ನಡ ಪ್ರಾಥಮಿಕ ಶಾಲೆಗೆ ದಾಖಲಾದರು. ಸಂಬಂಧಿಕರಾದ ಕಂಕಣವಾಡಿಯವರ ಮನೆಯಲ್ಲಿದ್ದುಕೊಂಡು ಶಿಕ್ಷಣ ಮುಂದುವರೆಯಿತು. ಅವರು ಏಳನೆಯ ತರಗತಿಯಲ್ಲಿ ಓದುತ್ತಿದ್ದಾಗ ಚಲೇಜಾವ ಚಳುವಳಿಲ್ಲಿ ಭಾಗವಹಿಸಿದರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಇವರ ಹುಟ್ಟೂರು ಇಟನಾಳವಾದರೂ ಕೂಡ, ಸ್ವಾತಂತ್ರ್ಯ ಚಳುವಳಿಯ ಕಾರ್ಯಾಚರಣೆಯ ಕೇಂದ್ರ ಹಿಡಕಲ್ಲವೇ ಆಗಿತ್ತು. ರಾಮಪ್ಪ ಕಂಕಣವಾಡಿ ಮತ್ತು ತರುಣ ಹೋರಾಟಗಾರರಿಂದ, ಗ್ರಾಮದಲ್ಲಿ ಸಂಘಟನೆಗೊಂಡ ಚಳಿವಳಿಕಾರರ ಗುಂಪನ್ನು ಸೇರಿಕೊಂಡರು. ನಂತರದಲ್ಲಿ ಹಿಡಕಲ್ಲ ಸ್ವಾತಂತ್ರ್ಯ ಹೋರಾಟಗಾರು ಯೋಜಿಸಿದ ಮತ್ತು ಕಾರ್ಯಾಚರಣೆಮಾಡಿದ ಎಲ್ಲಾ ಚಳುವಳಿಗಳಲ್ಲಿ ಇವರು ಭಾಗವಹಿಸಿದ್ದರು. ತಂಡದ ಜೊತೆಗೂಡಿ ಅನೇಕ ವಿಧಾಯಕ ಕಾರ್ಯಗಳಲ್ಲಿ ಭಾಗವಹಿಸಿ, ಶಿಕ್ಷೆಯನ್ನು ಕೂಡ ಅವರ ಜೊತೆಯೇ ಅನುಭವಿಸಿದರು.

೧೯೪೨ರ ಅಗಸ್ಟ್ ಮತ್ತು ಸಪ್ಟೆಂಬರ ತಿಂಗಳಲ್ಲಿ, ಮಧ್ವರಾಜ ದೇಶಪಾಂಡೆಯವರ ಮನೆಯಲ್ಲಿ, ಅನಂತ ಶಾಮರಾವ ಕುಲಕರ್ಣಿಯವರು ನಡೆಸಿದ ಗುಪ್ತ ಸಭೆಗಳಲ್ಲಿ ಇವರು ಭಾಗವಹಿಸಿದ್ದರು.

ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ, ಕುಡಚಿ-ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ್ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ, ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ ಚಳುವಳಿಗಳಲ್ಲಿ ಇವರು ಭಾಗವಹಿಸಿದ್ದರು.

ಸುಲದಾಳ ರೇಲ್ವೇ ಸ್ಟೇಷನ ಸುಡುವ ಕಾರ್ಯ ಮತ್ತು ರಾಯಬಾಗ ರೇಲ್ವೇ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

ಚಲೇ ಜಾವ ಚಳುವಳಿಯ ೧೯೪೨ರ ಅಕ್ಟೋಬರ ತಿಂಗಳಲ್ಲಿ, ಇಮಾಮಸಾಹೇಬ ಮುಲ್ಲಾರ ನೇತೃತ್ವದ, ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡಲು ಹೋರಾಟಗಾರರ ತಂಡದಲ್ಲಿ ಭಾಗವಹಸಿದ್ದರು. ದುರ್ದೈವವಶಾತ ಚಿಮಣಿ ಎಣ್ಣೆ ದೊರೆಯದ್ದರಿಂದ ಕಛೇರಿ ಸುಡುವ ಕಾರ್ಯ ಕೈಗೂಡಲಿಲ್ಲ.

ಅಕ್ಟೋಬರ ೨ರಂದು ಜಮಂಖಡಿ ಸಂಸ್ಥಾನದ ಸಾವಳಗಿಯಲ್ಲಿ ಗಾಂಧಿ ಜಯಂತಿ ಆಚರಿಸಿದರು. ಮರುದಿನ ಅಥಣಿಗೆ ಆಗಮಿಸಿ ಮಂಗಸೂಳಿಗೆ ಹೋಗಲು, ಅಥಣಿ ಬಸ್ ಸ್ಟಾಂಡಿನಲ್ಲಿ ಕಾಯುತ್ತಿದ್ದಾಗ ಪೊಲೀಸರು ೩-೧೦-೧೯೪೨ರಂದು ಇವರನ್ನು ಬಂಧಿಸಿದರು. ಇವರ ಕೈಚೀಲ ಶೋಧಿಸಿದಾಗ, ಕಬ್ಬಿಣ ಕೊರೆಯುವ ಎರಡು ಕರಗಸಗಳು, ಅದಕ್ಕೆ ಸಹಾಯಕವಾಗುವ ಇನ್ನೆರಡು ಸ್ಪೇಯರ್ ಬ್ಲೇಡಗಳು, ಒಂದು ಕೈಬಾಚಿ, ಒಂದು ತುದಿಗೆ ಚಿಂದಿ ಬಟ್ಟೆಯಿಂದ ಸುತ್ತಲ್ಪಟ್ಟ ಬಿದರಿನ ಹಿಡಿಕೆಯುಳ್ಳ ೬ ತಗಡಿನ ಜಕಳಿಗಳು, ವಿದ್ರೋಹಾತ್ಮಕ ವಿಷಯದ ಕರಪತ್ರ ದೊರೆತವು. ವಿಚಾರಣೆಯ ನಂತರ ಬೆಳಗಾವಿಯ ಹಿಂಡಲಗಾ ಜೇಲಿಗೆ ವರ್ಗಾಯಿಸಿದರು. ಅಟಲ ಬಿಹಾರಿ ವಾಜಪೇಯಿಯವರೂ ಅದೇ ಜೈಲಿನಲ್ಲಿದ್ದರು, ಆಗ ಅವರ ಜೊತೆ ಸಂಪರ್ಕ ಬೆಳೆಯಿತು.

ಇವರ ಮೇಲೆ, ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದಲ್ಲಿ, ಸ್ಪೇಶಲ ಕೇಸ ನಂ ೧/೧೯೪೩ ದಾಖಲಾಯಿತು. ೫-೬ ತಿಂಗಳು ನ್ಯಾಯವಿಚಾರಣೆ ನಡೆದು, ದಿನಾಂಕ ೩೧-೦೩-೧೯೪೩ರ ಆದೇಶದಲ್ಲಿ, ದುರಭಿಪ್ರಾಯದ ಕರಪತ್ರ ಮತ್ತು ಸಾಹಿತ್ಯಗಳನ್ನು ಬೇಕಾಯ್ದೆಶಿರ ಹೊಂದಿದ್ದಕ್ಕಾಗಿ, ಭಾರತೀಯ ರಕ್ಷಣಾತ್ಮಕ ಕಾಯ್ದೆಯ ಕಲಂ ೩೯ರ ಬಿ ಪ್ರಕಾರ ಶಿಕ್ಷಾರ್ಹರಾಗುತ್ತಾರೆ. ಇವರಿಗೆ ಮೂರು ವರ್ಷ ಶಿಕ್ಷೆ ಆಯಿತು. ಎಪ್ರಿಲ ತಿಂಗಳ ೩೦ರಂದು ೬೦ ಜನ ಕೈದಿಗಳ ಗುಂಪಿನೊಂದಿಗೆ ಇವರನ್ನು ವಿಸಾಪೂರ ಜೈಲಿಗೆ ಕಳಿಹಿಸಲಾಯಿತು. ಆ ಜೈಲಿನಲ್ಲಿ ತೀವ್ರ ಅನಾರೋಗ್ಯದಿಂದ ಬಳಲಿದರು. ಅವರನ್ನು ೧೯೪೪ ಡಿಸೆಂಬರ ೧೨ರಂದು ಬಿಡುಗಡೆ ಮಾಡಲಾಯಿತು. ಜೈಲಿನಿಂದ ಮರಳಿದ ನಂತರ ೨-೩ ತಿಂಗಳ ಅಭ್ಯಾಸಮಾಡಿ ಏಳನೆಯ ತರಗತಿಯಲ್ಲಿ ತೇರ್ಗಡೆಯಾದರು.

ಇವರ ಹೋರಾಟದ ಸೇವೆಯನ್ನು ಗುರುತಿಸಿದ ಭಾರತ ಸರ್ಕಾರ, ೧೯೭೨ರ ಅಗಸ್ಟ ೧೫ರಂದು ದಿಲ್ಲಿಯಲ್ಲಿ ರಾಷ್ಟ್ರಪತಿ ವ್ಹಿ. ವ್ಹಿ. ಗಿರಿಯವರ ಅಧ್ಯಕ್ಷತೆಯಲ್ಲಿ ನಡೆದ ಸ್ವಾತಂತ್ರ್ಯ ಯೋಧರ ಸನ್ಮಾನ ಸಮಾರಂಭದಲ್ಲಿ, ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧೀಯವರು ತಾಮ್ರ ಪತ್ರವನ್ನು ನೀಡಿ ಸನ್ಮಾನಿಸಿದರು.

**ವೈವಾಹಿಕ ಜೀವನ :**

ಸ್ವಾತಂತ್ರ್ಯಾ ನಂತರದಲ್ಲಿ ತಾರವ್ವ (ತಾರಾಬಾಯಿ) ಎನ್ನುವವರ ಜೊತೆ ಇವರ ವಿವಾಹವಾಯಿತು. ಪ್ರಕಾಶ, ಅಣ್ಣಪ್ಪ, ಚಿದಾನಂದ ಎಂಬ ಮೂರು ಗಂಡು ಮಕ್ಕಳು, ಮಾಲಾ, ಅನುಸೂಯಾ ಎಂಬ ಎರಡು ಹೆಣ್ಣು ಮಕ್ಕಳು.

**ಸಾಮಾಜಿಕ ಚಟುವಟಿಕೆಗಳು :**

೧೯೪೫ರ ಅಗಸ್ಟ ೧೫ರಂದು ಬೆಳಗಾವಿಯಲ್ಲಿ ಕೆಲ ಧುರೀಣರೊಂದಿಗೆ, ಅಖಿಲ ಕರ್ನಾಟಕ ಕುರುಬರ ಉಚಿತ ಪ್ರಸಾದ ನಿಲಯವನ್ನು 'ವಿಜಯನಗರ ವಿದ್ಯಾರ್ಥಿ ನಿಲಯ' ವೆಂದು ಸ್ಥಾಪಿಸಿ, ಅದರ ಕಾರ್ಯದರ್ಶಿಯಾಗಿ ನೇಮಕಗೊಂಡು, ಹಳ್ಳಿ-ಹಳ್ಳಿಗೆ ಹೋಗಿ ಕಾಳಿ-ಕಡಿ ಕೂಡಿಸಿ ೧೯೭೦ರ ವರೆಗೆ ನಡೆಸಿಕೊಂಡು ಬಂದರು.

೧೯೫೦ ಎಪ್ರಿಲ ೨೨ರಿಂದ ಒಂದು ವರ್ಷ ಕಾಲ ಗೃಹರಕ್ಷಕರಾಗಿ ಕಾರ್ಯ ನಿರ್ವಹಿಸಿದರು. ೧೯೬೨ರಲ್ಲಿ ವಿದ್ಯಾರ್ಥಿಗಳನ್ನು ಕರೆದುಕೊಂಡು ಬೆಳಗಾವಿಗೆ ಹೋಗಿ ಗಾಯಾಳು ಸೈನಿಕರಿಗೆ ರಕ್ತ ದಾನ ಮಾಡಿದರು. ಇದೇ ಸಮಯದಲ್ಲಿ ಪ್ರತಿ ರವಿವಾರ ಒಂದೊಂದು ಗ್ರಾಮಕ್ಕೆ ತೆರಳಿ ಹರಿಜನಕೇರಿಗಳನ್ನು ಸ್ವಚ್ಚ (ಸಫಾಯಿ) ಮಾಡಿ ಬರುತ್ತಿದ್ದರು. ಇದನ್ನು ಕಂಡು ಬೆಳಗಾವಿಯ ಜಯದೇವರಾವ ಕುಲಕರ್ಣಿಯವರು ಒಂದು ಟೆಂಪೋ ಗಾಡಿಯನ್ನು ಇವರಿಗೆ ಉಚಿತವಾಗಿ ನೀಡಿದರು.

ಇವರು ೧೯೬೫ರಿಂದ ೧೯೬೮ರವರೆಗೆ ಬೆಳಗಾವಿ ಜಿಲ್ಲಾ ಕಾಂಗ್ರೇಸ್ ಸೇವಾದಳದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. 'ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಯೋಧರ ಸಂಸ್ಥೆ ಇಟನಾಳ' ಸಂಘ ಸ್ಥಾಪಿಸಿ, ಅದರ ಆಧ್ಯಕ್ಷರಾಗಿ ಸ್ವಾತಂತ್ರ್ಯ ಹೋರಾಟಗಾರ ಆಸರೆಯಾಗಿ ಕಾರ್ಯ ನಿರ್ವಹಿಸಿದರು. ಸ್ವಾತಂತ್ರ್ಯ ಯೋಧರ ನಿವೃತ್ತಿ ವೇತನವನ್ನು ಇವರು ಪಡೆಯುತ್ತಿದ್ದರು. ಸದ್ಯ ಇವರ ಧರ್ಮ ಪತ್ನಿಯವರಿಗೆ ಪೆನಶನ್ ಬರುತ್ತಿದೆ.

**ಪ್ರಾಮಾಣಿಕತೆ :**

೧೯೬೨ರಲ್ಲಿ ಗೋಕಾಕಕ್ಕೆ ಬಂದಾಗ, ಪೇಟೆಯಲ್ಲಿ ಒಂದೂವರೆ ತೊಲೆಯ ಚಿನ್ನದ ಚೈನು ಸಿಕ್ಕಿತು. ಆ ಕುರಿತು ಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಅದರ ಮಾಲೀಕರಾದ ಕೌಜಲಗಿ ಊರಿನ ಯಲಿಗಾರ ಅವರಿಗೆ ಒಪ್ಪಿಸಿದರು. ಆಗ ಅವರು ಸಂತೋಷಗೊಂಡು ನಿಮಗೇನು ಕೊಡಲಿ ಎಂದು ಕೇಳಿದರು. ಬೋರ್ಡಿಂಗ ವಿದ್ಯಾರ್ಥಿಗಳಿಗೆ ಒಂದು ಚೀಲ ಅಕ್ಕಿ ನೀಡಿರೆಂದು ಕೇಳಿದರು. ಅವರಿಂದ ಒಂದು ಚೀಲ ಅಕ್ಕಿಯನ್ನು ಪಡೆದರು.

**ಕೊನೆಯ ದಿನಗಳು :**

ಇವರು ೧೬- ೧೧-೨೦೦೪ರಂದು ದೈವಾಧೀನರಾದರು.

### ೨.೫. ಮೌಲಾಸಾಹೇಬ(ಮೌಲಾಲಿ) ಹುಸೇನಸಾಹೇಬ ಮುಲ್ಲಾ

**ಜನನ :**

ಇವರು ಇಮಾಮಸಾಹೇಬ ಮುಲ್ಲಾರ ಸಹೋದರರು. ಹುಸೇನಸಾಹೇಬ ಮತ್ತು ಮಾಸಾಹೇಬ ದಂಪತಿಗಳಿಗೆ ಜನಿಸಿದ ಐದನೆಯ ಮಗ ಮೌಲಾಸಾಹೇಬ. ಕ್ರಿ.ಶ ೧೯೧೦ರಲ್ಲಿ ಇವರ ಜನನವಾಯಿತು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಇವರು ಸಹೋದರರಾದ ಇಮಾಮಸಾಹೇಬರ ಜೊತೆಯಲ್ಲಿ, ಅವರು ಮಾಡಿದ ಎಲ್ಲಾ ಸ್ವಾತಂತ್ರ್ಯದ ಹೋರಾಟದ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು. ಅಥಣಿ ಬಸ್ ಸ್ಟಾಂಡಿನಲ್ಲಿ ಹೋರಾಟಗಾರರ ತಂಡದ ಜೊತೆಯಲ್ಲಿದ್ದಾಗ ಪೊಲೀಸರು ಇವರನ್ನು ಬಂಧಿಸಿ ಬೆಳಗಾವಿಯ ಹಿಂಡಲಗಾ ಜೇಲಿಗೆ ವರ್ಗಾಯಿಸಿದರು.

ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದ ಸ್ಪೇಶಲ ಕೇಸ ನಂಬರ ೧/೧೯೪೩ರ ನ್ಯಾಯವಿಚಾರಣೆಯ ಆದೇಶವನ್ನು, ದಿನಾಂಕ ೩೧-೦೩-೧೯೪೩ರಂದು ಮಾಡಲಾಗಿ, ಇವರಿಗೆ ಎರಡೂವರೆ ವರ್ಷಗಳ ಸಶ್ರಮ ಶಿಕ್ಷೆಯನ್ನು ವಿಧಿಸಲಾಯಿತು. ಇವರು ಎರಡೂವರೆ ವರ್ಷಗಳ ಸೆರೆಮನೆವಾಸವನ್ನು ಅನುಭವಿಸಿದರು.

**ಸೇವಾದಳದ ಕಾರ್ಯಕರ್ತರಾಗಿ ಸೇವೆ :**

ಇವರು ಪಾಶ್ಚಾಪೂರದ ಎನ್.ಆರ್.ಮಠದರ ಜೊತೆಯಲ್ಲಿ ೧೯೫೦ರಿಂದ ೧೯೬೩ರವರೆಗೆ ಸೇವಾದಳದ ಕಾರ್ಯಕರ್ತರಾಗಿ ಕೆಲಸ ಮಾಡಿದರು. ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಲ್ಲಿ ನೌಕರಿ ಪಡೆದು ಕೊಂಡರು. ಮೊದಲು ಮೂಡಬಿದರೆಯಲ್ಲಿ ಸೇವೆ ಆರಂಭಿಸಿ, ತಮಿಳುನಾಡಿನ ಕಡಲೂರಿಗೆ ವರ್ಗಾವಣೆಗೊಂಡರು. ದಾವಣಗೆರೆ ತಾಲೂಕಿನ ಕೊಡಗನೂರು, ಚಿತ್ರದುರ್ಗ ಜಿಲ್ಲೆಯ ಹೋಳಲ್ಕೆರೆಗಳಲ್ಲಿ ಇನ್‌ಸ್ಪೇಕ್ಟರರಾಗಿ ಸೇವೆಸಲ್ಲಿಸಿದ್ದರು. ಚಿತ್ರದುರ್ಗದಲ್ಲಿ ಸೇವೆ ಸಲ್ಲಿಸುತ್ತಿರುವಾಗ ನಿವೃತ್ತಿಯನ್ನು ಹೊಂದಿದರು.

**ಕೊನೆಯ ದಿನಗಳು :**

೨೦೧೦ರಲ್ಲಿ ಚಿತ್ರದುರ್ಗದಲ್ಲಿ ನಿಧನರಾದರು.

## ೨.೩. ವಾಸುದೇವ ಅಲ್ಲಪ್ಪ ನಾಯಿಕ

**ಜನನ :**

ಇವರ ತಂದೆ ಅಲ್ಲಪ್ಪ. ತಾಯಿ ಶೀಲವಂತಿ. ಈ ದಂಪತಿಗಳಿಗೆ ಎರಡು ಜನ ಮಕ್ಕಳು. ಅವರಲ್ಲಿ ಎರಡನೆಯ ಮಗನೇ ವಾಸುದೇವ ನಾಯಿಕ. ಇವರು ೨೦-೦೫-೧೯೧೮ರಂದು ಹಿಡಕಲ್ಲ ಗ್ರಾಮದಲ್ಲಿ ಜನಿಸಿದರು.

**ಮನೆತನದ ಹಿನ್ನೆಲೆ :**

ಇವರ ಮನೆತನದವರು "ಶಿವಾಜಿ ಕಾಲದಲ್ಲಿ ನಿಪ್ಪಾಣಿಕರ ಸಂಸ್ಥಾನಿಕರೊಂದಿಗೆ ಕಪ್ಪು ಕಾಣಿಕಗಳ ಸಂಭಂದದಲ್ಲಿ ಹೋರಾಡಿದವರು. ಇವರ ಪೂರ್ವಜರು, ದರೂರ ಗ್ರಾಮದ ನಿರ್ವಾಣೆಪ್ಪ ನಾಯಕರ ಮಗನನ್ನು ದತ್ತಕ ಪಡೆದುಕೊಂಡರು. ದತ್ತಕ ಪುತ್ರರಿಗೆ ಆದ ಮೂರು ಜನ ಮಕ್ಕಳಲ್ಲಿ ಅಲ್ಲಪ್ಪ ಹಿರಿಯವನು. ಅಲ್ಲಪ್ಪನವರ ಎರಡನೆಯ ಮಗನೇ ವಾಸುದೇವ ಅಲ್ಲಪ್ಪ ನಾಯಿಕ".[೧೩]

**ಶಿಕ್ಷಣ :**

ಗ್ರಾಮದ ಪ್ರಾಥಮಿಕ ಶಾಲೆಯಲ್ಲಿ ೭ ನೆಯ ತರಗತಿಯವರೆಗೆ ವಿದ್ಯಾಭ್ಯಾಸವನ್ನು ಮಾಡಿದರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

"೧೯೩೧-೩೨ರಲ್ಲಿ, ಗೋಕಾಕ ತಾಲೂಕಿನ ಪೈಕಿ ಕಂಡ್ರಟ್ಟಿ ಗ್ರಾಮದ ಉದ್ದಪ್ಪ ಕೆಂಚಪ್ಪ ಎತ್ತಿನಮನಿಯವರು, ವಾಸುದೇವ ಮತ್ತು ರೇವಣ್ಣ ಬನಹಟ್ಟಿ ಇವರನ್ನು ಎರಡನೆಯ ತರಗತಿಯಲ್ಲಿ ಕಲಿಯುತ್ತಿರುವಾಗಲೇ (೧೪ ವರ್ಷ) ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಉತ್ತೇಜಿಸಿ ಜೊತೆಗೆ ಕರೆದು ಕೊಂಡು ಹೋಗಿ, ಕಾಯ್ದೆ ಭಂಗ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸುವಂತೆ ಮಾಡಿದರು".[೧೪]

"ಮಹಾತ್ಮ ಗಾಂಧಿಜೀಯವರ ಆದೇಶದ ಮೇರೆಗೆ ಸಿಂಧಿ ಗಿಡಗಳನ್ನು ಕಡೆಯುವುದು, ವಿದೇಶಿ ಬಟ್ಟೆಗಳನ್ನು ಸುಡುವುದು, ಖಾದಿಯನ್ನು ಪ್ರೋತ್ಸಾಹಿಸುವುದು, ಉಪ್ಪು ತಯಾರಿಸಿ ಮಾರುವುದು ಇತ್ಯಾದಿ"[೧೫] ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಇವರು ೨೦ ರ ಹೊಸ್ತಿಲಲ್ಲಿ ದೇಶ ಸೇವೆ ಪುಣ್ಯ ಕಾರ್ಯವೆಂದೇ ಭಾವಿಸಿದ್ದರು. ತನು-ಮನಗಳನ್ನ ಒಂದು ಗೂಡಿಸಿ ಭಾರತಾಂಭೆಯ ಸೇವೆಯಲ್ಲಿ ತೊಡಗಿದರು.

"ವಾಸುದೇವರ ವಿದ್ಯಾರ್ಥಿ ಜೀವನೇ ರಾಜಕೀಯ ಜೀವನವಾಗಿತ್ತು. ಇವರು ಚೆನ್ನಪ್ಪಾ ವಾಲಿ, ಶಾಂತಿನಾಥ ಇಂಗಳೆಯವರ ಪ್ರಭಾವದಿಂದ, ಉದ್ದಪ್ಪ ಎತ್ತಿನಮನಿ, ರಾಮಪ್ಪಾ ಕಂಕಣವಾಡಿ ಇವರ ಪ್ರೋತ್ಸಾಹದಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು".[೧೬]

೧೯೩೭ ರಲ್ಲಿ ಗೋಕಾಕಕ್ಕೆ, ಕಾಮ್ರೆಡ ಎಂ. ಎಸ್. ರಾಯ್. ಮತ್ತು ಪಂಡಿತ ಜವಹಾರಲಾಲ ನೆಹರು ಭೇಟ್ಟಿ ಇತ್ತರು. ಆಗ ನಡೆದ ಸಭೆಯಲ್ಲಿ ೨೫ ಜನ ಸ್ವಯಂ ಸೇವಕರಲ್ಲಿ ವಾಸುದೇವ ಅಲ್ಲಪ್ಪ ನಾಯಿಕ ಒಬ್ಬರಾಗಿದ್ದರು".[೧೭]

೧೯೩೭ ರ ವೇಳೆಯಲ್ಲಿ ತೀವ್ರ ಮತ್ತು ಸಕ್ರೀಯ ಚಟುವಟಿಕೆಗಳಿಂದಾಗಿ ಇವರು ಅಥಣಿ ತಾಲೂಕ ಕಾಂಗ್ರೇಸ್ಸ ಕಮೀಟಿಯ ಸೆಕ್ರೆಟರಿಯಾಗಿ ನೇಮಕಗೊಂಡು ಕಾರ್ಯ ನಿರ್ವಹಿಸಿದರು. ಅಧ್ಯಕ್ಷರಾದಿಯಾಗಿ, ತಾಲೂಕಿನ ಎಲ್ಲಾ ಚಳುವಳಿಕಾರರ ಜೊತೆ ನಿಕಟ ಸಂಪರ್ಕವನ್ನು ಹೊಂದಿದ್ದರು.

೧೯೩೭ರ ಎಪ್ರಿಲ್ ಕೊನೆಯ ವಾರದಲ್ಲಿ ನಡೆದ ೧ ತಿಂಗಳ ಹುದಲಿಯ ಸಭೆಯಲ್ಲಿ ಮತ್ತು ೧೯೩೮ ಕುಡಚಿಯಲ್ಲಿ ಸಮಾವೇಶಗೊಂಡ ದಕ್ಷಿಣ ಭಾರತದ ಸಂಸ್ಥಾನ ಪರಿಷತ್ತು ಸಭೆಯಲ್ಲಿ, ಸ್ವಯಂ ಸೇವಕರಾಗಿ ಇವರು ಭಾಗವಹಿಸಿದ್ದರು.

೧೯೩೮ರಲ್ಲಿ ಇವರು ಮತ್ತು ಇನ್ನಿತರ ಚಳುವಳಿಗಾರರು ಗ್ರಾಮದ ಚಾವಡಿಯಲ್ಲಿ ಕುಳಿತು ಚಳುವಳಿಯ ಕುರಿತು ಚರ್ಚಿಸುತ್ತಿದ್ದರು. ಅಲ್ಲಿಗೆ ಬಂದ ಪೊಲೀಸರು ಇವರನ್ನು ಬಂಧಿಸಿ ಕುಡಚಿ ಠಾಣೆಗೆ ಒಯ್ದು, ಬೆಳಗಾವಿ ಜೇಲಿಗೆ ವರ್ಗಾಯಿಸಿದರು. ೬ ತಿಂಗಳ ನಂತರ ಜೇಲಿನಿಂದ ಇವರು ಬಿಡುಗಡೆಗೊಂಡರು.

೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಲು ಇವರಿಗೆ ಒಪ್ಪಿಗೆ ದೊರೆತಿತ್ತು. ಮದ್ವರಾಜ ದೇಶಪಾಂಡೆಯವರ ಮನೆಯಲ್ಲಿ ಅಥಣಿಯ ಅನಂತ ಶಾಮರಾವ ಕುಲಕರ್ಣಿಯವರ ಸಮ್ಮುಖದಲ್ಲಿ, ೧೯೪೨ರ ಅಗಸ್ಟ ಮತ್ತು ಸಪ್ಟೆಂಬರ ತಿಂಗಳಲ್ಲಿ, ನಡೆದ ಗುಪ್ತ ಸಭೆಗಳಲ್ಲಿ ಇವರು ಭಾಗವಹಿಸಿದ್ದರು.

ಗ್ರಾಮದ ತರುಣರ ಪಡೆಯು ಯೋಜಿಸಿದ, ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ, ಕುಡಚಿ-ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ್ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ, ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ, ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೇ ಸ್ಟೇಷನ ಸುಡುವ,

ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೇ ಸ್ಟೇಷನ ಸುಡುವ ಕಾರ್ಯಗಳಲ್ಲಿ ಇವರು ಭಾಗಿಗಳಾಗಿದ್ದರು. ಬುಲೇಟಿನ್ ಬರೆದು ಹಂಚುವುದನ್ನು ಮಾಡುತ್ತಿದ್ದರು. ಕಾರ್ಯಕರ್ತರಿಗೆ ಬೇಕಾಗುವ ಹಣವನ್ನು ಗೊತ್ತು ಪಡಿಸಿದ ಸ್ಥಳದಿಂದ ಅಥಣಿಗೆ ತಲುಪಿಸುವ ಕಾರ್ಯ ಮಾಡುತ್ತಿದ್ದರು. ಇವರು ತಾಲೂಕಿನಲ್ಲಿ ಚೆನ್ನಪ್ಪ ವಾಲಿಯವರನ್ನು ಕರೆದುಕೊಂಡು ಹಳ್ಳಿಗೆ-ಹಳ್ಳಿಗೆ ಪ್ರಚಾರ ಕಾರ್ಯ ಮಾಡುತ್ತಿದ್ದರು.

೧೯೪೨ರ ಅಕ್ಟೋಬರಲ್ಲಿ ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ಯೊಜನೆಗೆ ಬೆನ್ನೆಲುಬಾಗಿದ್ದರು. ಸಾವಳಗಿ ಗ್ರಾಮದಲ್ಲಿ ಅಕ್ಟೋಬರ ೨ರಂದು ಗಾಂಧೀ ಜಯಂತಿಯನ್ನು ಆಚರಿಸಿದರು. ಮರುದಿವಸ ಮಂಗಸೂಳಿಗೆ ಹೋಗಲು ಅಥಣಿ ಬಸ್‌ಸ್ಟ್ಯಾಂಡಿನಲ್ಲಿ ಕಾಯುತ್ತಿದ್ದಾಗ ಪೊಲೀಸರು ಇವರನ್ನು ಬಂಧಿಸಿ ಜಪ್ತಿ ಮಾಡಿದಾಗ ಒಂದು ಲೋಡ್ ಮಾಡಿದ ಸಿಡಿಮದ್ದು, ಕರಪತ್ರಗಳು ದೊರೆತವು.

ಇವರನ್ನು ಬೆಳಗಾವಿಯ ಕಿಲ್ಲಾ ಜೈಲಿಗೆ ಹಾಕಿದರು. ನಂತರ ೨-೫-೧೯೪೩ರಿಂದ ೧೮-೦೬-೧೯೪೩ರವರೆಗೆ, ವಿಸಾಪೂರ ಜೈಲಿಗೆ ವರ್ಗಾಯಿಸಿದರು. ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದಲ್ಲಿ, ಸ್ಪೇಶಲ ಕೇಸ ನಂ ೧/೧೯೪೩ರ ದಿನಾಂಕ ೩೧-೦೩-೧೯೪೩ರ ಆದೇಶದಲ್ಲಿ ಭಾರತೀಯ ರಕ್ಷಣಾತ್ಮಕ ಕಾಯ್ದೆ ೩೯ರ ಪ್ರಕಾರ ಇವರಿಗೆ, ೧ ವರ್ಷ ಕಠಿಣ ಶಿಕ್ಷೆ ವಿಧಿಸಿತು. ಇವರು ೮ ತಿಂಗಳ ೧೬ ದಿನಗಳ ಶಿಕ್ಷೆ ಅನುಭವಿಸಿದರು. ಕಾರಾವಾಸದಿಂದ ಬಿಡುಗಡೆಗೊಂಡ ನಂತರವು, ಇವರ ಹೋರಾಟಗಳು ಮುಂದುವರೆದವು.

**ಸ್ವಾತಂತ್ರ್ಯಾ ನಂತರ ಜೀವನ :**

ಸ್ವಾತಂತ್ರ್ಯ ನಂತರ ಇವರು ಗ್ರಾಮದಲ್ಲಿ ಚಿಕ್ಕ ಆಸ್ಪತ್ರೆಯನ್ನು ತೆರೆದು ಗ್ರಾಮದ ಮತ್ತು ಸುತ್ತಮುತ್ತಲಿನ ಜನರ ಸೇವೆಯಲ್ಲಿ ತೊಡಗಿದರು. ಸುಂದರಾಬಾಯಿ ಎನ್ನುವವರ ಜೊತೆ ಇವರ ವಿವಾಹವಾಯಿತು. ಇವರಿಗೆ ಅಜಿತ, ಮಹಾವೀರ ಪ್ರಭಾಕರ ಎನ್ನುವ ಒಟ್ಟು ಮೂರು ಗಂಡು ಮಕ್ಕಳು. ಗಾಂಧೀಜಿಯವರ ತತ್ವ ಸಿದ್ಧಾಂತಗಳಲ್ಲಿ ನಿಷ್ಠೆ ನಂಬಿಕೆಯುಳ್ಳವರಾದ ಇವರು ಇಂದಿಗೂ ಖಾದಿ ಧಾರಿಗಳಾಗಿದ್ದಾರೆ.

೧೯೭೦ರಿಂದ ಸರ್ಕಾರದ ವತಿಯಿಂದ ಸ್ವಾತಂತ್ರ್ಯ ಯೋಧರಿಗೆ ಕೊಡಮಾಡುವ ಪಿಂಚಣಿ ಸೌಲಭ್ಯವನ್ನು ಹೊಂದಿದ್ದು, ಸಧ್ಯ ಮಾಸಿಕವಾಗಿ ೧೨೦೦೦/-ರೂ. ಗಳನ್ನು ಪಡೆಯುತ್ತಿದ್ದಾರೆ. ಸಾರ್ಥಕ ೯೩ ವಸಂತಗಳನ್ನು ಪೂರೈಸಿ ಶತಕದ ಹೊಸ್ತಿಲಲ್ಲಿದ್ದಾರೆ. ದೇಶದ ಇಂದಿನ ಭ್ರಷ್ಟ ಆಡಳಿತ ವ್ಯವಸ್ಥೆಯ ವಿರುದ್ಧ ಕಿಡಿಕಾರುತ್ತಾ, ನಯವಂಚಕ ರಾಜಕಾರಣಿಗಳ, ಅಪ್ರಮಾಣಿಕ ಅಧಿಕಾರಿಗಳ, ಲಂಚವನ್ನೇ ಬಂಡವಾಳವನ್ನಾಗಿ ಮಾಡಿಕೊಂಡಿರುವ ಸರ್ಕಾರಿ ಕಛೇರಿಗಳ ವಿರುದ್ಧ ಹೋರಾಟ ಮಾಡುವ ಕಾಲ ದೂರವಿಲ್ಲವೆಂಬ ತಮ್ಮ ಅಸಮಾಧಾನವನ್ನು ಸ್ಫೋಟಿಸುತ್ತಾರೆ.

## ೨.೭. ಭೀಮರಾವ ಮಾಯಪ್ಪ ಕದಮ

**ಜನನ :**

ಮಾಯಪ್ಪಾ ಮತ್ತು ಗಂಗೂಬಾಯಿ ಎಂಬ ದಂಪತಿಗಳಿಗೆ ರಾಣಬಾ, ಯಲ್ಲಪ್ಪ, ಭೀಮರಾವ, ಧರ್ಮಾಜಿ ಎಂಬ ನಾಲ್ಕು ಗಂಡು ಮತ್ತು ಯಲ್ಲವ್ವ, ಪಾರುಬಾಯಿ, ಹೀರಾಬಾಯಿ, ಯಮುನಾಬಾಯಿ ಎಂಬ ನಾಲ್ಕು ಹೆಣ್ಣು, ಒಟ್ಟು ಎಂಟು ಮಕ್ಕಳು. ಅವರಲ್ಲಿ ಮೂರನೆಯ ಮಗನೇ ಭೀಮರಾವ ಸುಮಾರು ಕ್ರಿ.ಶ. ೧೯೨೦ರ ದಶಕದಲ್ಲಿ ಹಿಡಕಲ್ಲದಲ್ಲಿ ಜನಿಸಿದರು.

**ಮನೆತನದ ಹಿನ್ನೆಲೆ :**

ಇವರ ತಂದೆ ಮಾಯಪ್ಪಾನವರು ಬಡತನದ ಜೀವನವನ್ನು ಸಾಗಿಸಿದರು ಕೂಡ, ಸಮಾಜಕ್ಕೆ ಹೃದಯ ಶ್ರೀಮಂತಿಕೆಯನ್ನುಳ್ಳ ಮಕ್ಕಳನ್ನು ಕಾಣಿಕೆಯಾಗಿ ನೀಡಿದರು. ಒಬ್ಬ ಮಗ ಸಾಹಿತ್ಯ ಸೇವೆಯನ್ನು ಮಾಡಿದರೆ, ಇನ್ನಿಬ್ಬರು ದೇಶ ಸೇವೆಯನ್ನು ಮಾಡಲು ಟೊಂಕ ಕಟ್ಟಿ ನಿಂತರು.

ಇವರದು, ಬಾಲ್ಯ ವಿವಾಹ ೧೩-೧೪ ವರ್ಷ ವಯಸ್ಸಿನಲ್ಲಿ ದೊಂಡುಬಾಯಿ ಎಂಬವರ ಜೊತೆ ವಿವಾಹವಾಯಿತು. ಆಗ ದೊಂಡುಬಾಯಿ, ೩-೪ ವರ್ಷದ ಹಸುಗೂಸು. ಸ್ವಾತಂತ್ರ್ಯಾ ನಂತರದಲ್ಲಿ ಇವರ ದಾಂಪತ್ಯ ಜೀವನ ಆರಂಭವಾಯಿತು. ವಸಂತ ಮತ್ತು ಸುರೇಶ ಎಂಬ ಇಬ್ಬರು ಗಂಡು ಮಕ್ಕಳು ಮಾಲಾ, ಕಾಂಚನಾ, ಶಕುಂತಲಾ ಎಂಬ ಮೂರು ಹೆಣ್ಣು ಮಕ್ಕಳು. ಸುರೇಶ ಸದ್ಯ ಬೆಂಗಳೂರಿನ ಎ.ಜಿ. ಆಫೀಸನಲ್ಲಿ ಆಫೀಸರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಭೀಮರಾವ ಸಹೋದರ ರಾಣಬಾ ರವರು, ದೇಶದ ಅಂದಿನ ದುಸ್ಥಿತಿಯ ಚಿತ್ರಣವನ್ನು ಗ್ರಾಮ್ಯಭಾಷೆಯಲ್ಲಿ, ಕವಿತೆಗಳ ಸಾಲುಗಳಲ್ಲಿ ಸೆರೆಹಿಡಿದಿಡುವ ಮೂಲಕ, ಜನತೆಗೆ ಚುರುಕು ಮುಟ್ಟಿಸಿ, ಅವರನ್ನು ಹೋರಾಟಕ್ಕೆ ಪ್ರೇರೆಪಿಸುತ್ತಿದ್ದರು. ಅವರಿಂದ ರಚಿತವಾದ ಅನೇಕ ಪದ್ಯಗಳು ತರುಣರಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹಚ್ಚಿದವು.

**ಬಾರೋ ಚದುರಾ ನಾನು ಹೇಳುವೆ, ನಮ್ಮ ಹಿಂದೂಸ್ತಾನ ಚರಿತ್ರಾ !**
**ನಮ್ಮ ದೇಶವು ನಮಗೆ ಜರಾ ಇಲ್ಲಾ ಸ್ವಾತಂತ್ರ್ಯ !**
**ಕಾಲಕಟ್ಟಿ ರಾಜ್ಯ ಆಳ್ಯಾರ ಮಂಗ್ಯಾ ಇಂಗ್ರೇಜರಾ !!**
**ಗ್ರಾಮ ಹಿಡಕಲ್ಲ ಪ್ರತೇಶನ ವರದ ಭರಪೂರ !**
**ಮಂದ ಮತೀ ರಾಣು ಹೇಳಿದ ಇದರ ವಿಸ್ತಾರಾ !!**

ರಾಣಾಬಾ ಗೀತೆಗಳ ಪ್ರಭಾವದಿಂದಾಗಿಯೇ ಅಂದು ಇವರ ಸಹೋದರರಾದ ಭೀಮರಾವ ಮತ್ತು ೧೨ ವರ್ಷದ ಶಾಲಾ ಬಾಲಕ ಧರ್ಮು ಚಳುವಳಿಯ ಹೋರಾಟಗಾರರಾಗಿ ರೂಪಗೊಂಡರು.

**ಶಿಕ್ಷಣ :**

ಇವರು ೧ ನೆಯ ತರಗತಿಯಿಂದ ೬ ನೆಯ ತರಗತಿಯವರೆಗೆ, ಶಿಕ್ಷಣವನ್ನು ಗ್ರಾಮದಲ್ಲಿಯೇ ಪಡೆದುಕೊಂಡರು. ಹೋರಾಟದಲ್ಲಿ ಭಾಗವಹಿಸಿದ ಕಾರಣಕ್ಕಾಗಿ ಇವರನ್ನು ಬಂಧಸಿಲಾಯಿತು. ಚಿಕ್ಕ ಶಾಲಾಬಾಲಕ ಎನ್ನುವ ಕಾರಣಕ್ಕೆ ಬಿಡುಗಡೆ. ನಂತರದಲ್ಲಿ ೭ ನೆಯ ತಗರತಿಯ ಮುಲ್ಕೀ ಪರೀಕ್ಷೆ ಪಾಸು ಮಾಡಿದರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಇವರು ರಾಮಪ್ಪಾ ಕಂಕಣವಾಡಿ ಮತ್ತು ಭೀಮಪ್ಪ ಬಡಿಗೇರರ ಪ್ರಭಾವದಿಂದ ಚಳುವಳಿಯಲ್ಲಿ ಧುಮುಕಿದರು. ವಾಸುದೇವ ನಾಯಕರ ಜೊತೆ ಆತ್ಮೀಯ ಸ್ನೇಹವನ್ನು ಹೊಂದಿದ್ದರು. ತರುಣ ಸ್ವಾತಂತ್ರ್ಯ ಹೋರಾಟಗಾರರಾದ ಇಮಾಮಸಾಹೇಬ ಮುಲ್ಲಾ, ಲಕ್ಷ್ಮಣ ಡಾಂಗೆ, ಮಲ್ಲಪ್ಪ ಕೊಕಟನೂರ, ಬಸವಪ್ರಭು ದಲಾಲ, ಶಂಕರ ಪತ್ತಾರ, ಮೌಲಾಲೀ ಮುಲ್ಲಾ, ಮಧ್ವರಾಜ ದೇಶಪಾಂಡೆ, ಮುಂತಾದವರ ಜೊತೆ ಗೆಳೆತನವಿತ್ತು.

ಲಕ್ಷ್ಮಣ ಡಾಂಗೆಯವರು ಇವರ ಗಮನವನ್ನು ಚಳುವಳಿಯತ್ತ ವಾಲುವಂತೆ ಪ್ರೇರೆಪಿಸಿದರು. ಇವರು ೧೯೪೨ರ ಅಗಸ್ಟ್ ಮತ್ತು ಸಪ್ಟೆಂಬರ ತಿಂಗಳಲ್ಲಿ, ಅಥಣಿಯ ಅನಂತ ಶಾಮರಾವ ಕುಲಕರ್ಣಿಯವರು ಮಧ್ವರಾಜ ದೇಶಪಾಂಡೆಯವರ ಮನೆಯಲ್ಲಿ ನಡೆಸಿದ ಗುಪ್ತ ಸಭೆಗಳಲ್ಲಿ ಭಾಗವಹಿಸಿದ್ದರು.

ಇವರು ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ, ಕುಡಚಿ-ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ, ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ, ಗ್ರಾಮದ ತರುಣ ಹೋರಾಟಗಾರರ ತಂಡದಲ್ಲಿ ಭಾಗವಹಿಸಿದ್ದರು.

ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೆ ಸ್ಟೇಷನ ಸುಡುವ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೆ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

ಇಮಾಮಸಾಹೇಬರ ನೇತೃತ್ವದಲ್ಲಿ ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ತಂಡದಲ್ಲಿ ಇವರು ಭಾಗವಹಿಸಿದ್ದರು. ಇವರ ತಂಡದ ಜೊತೆ ಸಹೋದರ, ಶಾಲಾ ಬಾಲಕನಾದ ಧರ್ಮು ಕೂಡ ಭಾಗವಹಿಸಿದ್ದ. ಸಹೋದರ ರಾಣಬಾ ಅವರು ಸಾವಳಗಿಗೆ ತೆರಳಿ ಚಿಕ್ಕ ಸಹೋದರ ಧರ್ಮುನನ್ನು ಕರೆತರುವಲ್ಲಿ ಯಶಸ್ವಿಯಾದ. ಭೀಮರಾವರು ಚಳುವಳಿಯಿಂದ ಹಿಂದೆ ಸರಿಯಲಿಲ್ಲ.

ಅಥಣಿ ಬಸ್ ಸ್ಟಾಂಡಿನಲ್ಲಿ ಹೋರಾಟಗಾರರ ತಂಡದ ಜೊತೆಯಲ್ಲಿದ್ದಾಗ ಪೊಲೀಸರು ಇವರನ್ನು ಬಂಧಿಸಿದರು. ನಂತರ ಇವರನ್ನು ಬೆಳಗಾವಿಯ ಹಿಂಡಲಗಾ ಜೇಲಿಗೆ ವರ್ಗಾಯಿಸಿದರು. ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದಲ್ಲಿ, ಸ್ಪೇಶಲ ಕೇಸ ನಂಬರ ೧/೧೯೪೩ ದಾಖಲಾಯಿತು. ಸು ೫-೬ ತಿಂಗಳುಗಳವರೆಗೆ ನ್ಯಾಯವಿಚಾರಣೆ ನಡೆದು, ದಿನಾಂಕ ೩೧-೦೩-೧೯೪೩ರಂದು ಮಾಡಲಾದ, ಆದೇಶದಲ್ಲಿ ಇವರನ್ನು ನಿರಪರಾಧಿಗಳೆಂದು ಬಿಡುಗಡೆ ಮಾಡಲಾಯಿತು. ವಿಚಾರಣೆಯ ಸಮಯದ ೬ ತಿಂಗಳವರೆಗೆ ಇವರು ಸೆರೆಮನೆವಾಸವನ್ನು ಅನುಭವಿಸ ಬೇಕಾಯಿತು.

ಜೇಲಿನಿಂದ ಬಿಡುಗಡೆಯಾದ ನಂತರವು ಕೂಡ ಅನೇಕ ಕ್ರಾಂತಿಕಾರಿ ವಿಧ್ವಂಸಕ, ಚಟುವಟಿಕೆಗಳಲ್ಲಿ ಭಾಗವಹಿಸಿ ಭೂಗತರಾಗಿಯೇ ಕಾರ್ಯಚರಣೆಯನ್ನು ಮಾಡಿದರು. ಅಣ್ಣುಗುರೂಜಿ, ವಾಮನರಾವ ಬಿದರಿ, ವೆಂಕರೆಡ್ಡಿ ಹೂಲಿ, ಶ್ರೀರಂಗ ಕಾಮತ, ಅನಂತ ಶಾಮರಾವ ಕುಲಕರ್ಣಿ, ನಿಂಗಪ್ಪ ದಳವಾಯಿ, ಉದ್ದಪ್ಪ ಎತ್ತಿನಮನಿ, ಅಪ್ಪಣಗೌಡ ಪಾಟೀಲ, ನೀಲಪ್ಪಾ ಬಸ್ತವಾಡ, ಶಿವಪ್ಪ ನಿಂಗನೂರೆ, ಮಹಾದೇವ ಪೋದ್ದಾರ (ಶಂಕರಹಟ್ಟಿ), ಕಾಜಾಸಾ ನದಾಫ, ಸಂಕ್ರಪ್ಪ ಮಹಾದೇವ ಪತ್ತಾರ ಮೋದಿನಸಾಬ ಸಾವಳಗಿ, ಮುಂತಾದ ನಾಯಕರ ಜೊತೆ ನೇರ ಮತ್ತು ನಿಕಟ ಸಂಪರ್ಕವನ್ನು ಹೊಂದಿದ್ದರು.

ಇವರು ಸ್ವಾತಂತ್ರ್ಯಾ ನಂತರದಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನೇಮಕಗೊಂಡು ಸೇವೆ ಸಲ್ಲಿಸಿದರು. ಪ್ರಾರಂಭದಲ್ಲಿ ಹಿಡಕಲ್ಲ, ಬಾವಾನ ಸವದತ್ತಿ, ರಾಯಬಾಗ ಶಾಲೆಗಳಲ್ಲಿ ಸೇವೆ ಸಲ್ಲಿಸಿ, ಕೊನೆಗೆ ಹಿಡಕಲ್ಲ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ನಿವೃತ್ತಿ ಹೊಂದಿದರು. ಇವರು ಸರ್ಕಾರದ ಸ್ವಾತಂತ್ರ್ಯ ಯೋಧರ ಪಿಂಚಣಿ ಸೌಲಭ್ಯವನ್ನು ಪಡೆದುಕೊಂಡಿದ್ದರು.

**ಕೊನೆಯ ದಿನಗಳು :**

ನಿವೃತ್ತಿಯ ನಂತರ ಸಮಾಜ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ಇವರು ೧೮-೦೭-೧೯೯೭ರಂದು ದೈವಾಧೀನರಾದರು. ೭೪ ವಯಸ್ಸಿನ ಸದೃಢ ಶರೀರದ ಇವರ ಧರ್ಮಪತ್ನಿ ಇನ್ನು ಜೀವಂತವಾಗಿದ್ದು, ಪತಿಯ ನೆನಪುಗಳಲ್ಲಿ ಜೀವನ ಕಳೆಯುತ್ತಿದ್ದಾರೆ. ಇವರು ಸರ್ಕಾರದಿಂದ ಸ್ವಾತಂತ್ರ್ಯ ಯೋಧರಿಗೆ ದೊರೆಯುವ ಪಿಂಚಣಿ ಸೌಲಭ್ಯವನ್ನು ಪಡೆದುಕೊಂಡಿರುತ್ತಾರೆ.

## ೨.೮. ಮಲ್ಲಪ್ಪ ಪರಪ್ಪ ಕೊಕಟನೂರ

**ಜನನ :**

ಪರಪ್ಪನವರ ಮೊದಲ ಪತ್ನಿ ಪಾರವ್ವ, ಎರಡನೆಯ ಪತ್ನಿ ಸತ್ಯೆವ್ವ. ಸತ್ಯೆವ್ವಳ ಉದರದಿಂದ ಮಲ್ಲಪ್ಪ ಮತ್ತು ನಾಗಪ್ಪ ಎಂಬ ಎರಡು ಗಂಡು ಮಕ್ಕಳು ಮತ್ತು ಚೆನ್ನವ್ವ ಎಂಬ ಹೆಣ್ಣು ಮಗು ಜನಿಸಿದರು. ಸುಮಾರು ಕ್ರಿ.ಶ. ೧೯೨೦ರ ದಶಕದಲ್ಲಿ ಮಲ್ಲಪ್ಪನವರು ಹಿಡಕಲ್ಲದಲ್ಲಿ ಜನಿಸಿದರು.

**ಶಿಕ್ಷಣ :**

ಇವರು ಗ್ರಾಮದಲ್ಲಿರುವ ಪ್ರಾಥಮಿಕ ಶಾಲೆಯಲ್ಲಿ ೧ ನೆಯ ತರಗತಿಯಿಂದ ೭ ನೆಯ ತರಗತಿಯವರೆಗೆ ಶಿಕ್ಷಣವನ್ನು ಪಡೆದುಕೊಂಡರು. ೭ ನೆಯ ತರಗತಿಯ ಮುಲ್ಕೀ ಪರೀಕ್ಷೆಯನ್ನು ಬರೆಯಲು ಅಥಣಿಗೆ ಕಾಲ್ನಡಿಗೆಯಲ್ಲಿ ಹೋಗಿದ್ದರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಇವರ ಬಾಲ್ಯ ಸ್ನೇಹಿತ ವಾಸುದೇವ ನಾಯಿಕ ಮತ್ತು ಸಮವಯಸ್ಕರಾದ ಇಮಾಮಸಾಹೇಬ ಮುಲ್ಲಾ, ಶಂಕರ ಪತ್ತಾರ, ಬಸವಪ್ರಭು ದಲಾಲ, ಲಕ್ಷ್ಮಣ ಡಾಂಗೆ, ಭೀಮಾ ಕದಮ ಮುಂತಾದ ಗೆಳೆಯರ ಮತ್ತು ಜಿಲ್ಲಾ ನಾಯಕರ ಪ್ರಭಾವದಿಂದಾಗಿ ಚಳುವಳಿಯಲ್ಲಿ ಭಾಗವಹಿಸಿದರು.

ಇವರು ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ, ಕುಡಚಿ–ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ, ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ, ಗ್ರಾಮದ ತರುಣ ಹೋರಾಟಗಾರರ ತಂಡದಲ್ಲಿ ಭಾಗವಹಿಸಿದ್ದರು.

ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೇ ಸ್ಟೇಷನ ಸುಡುವ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೇ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

ಇಮಾಮಸಾಹೇಬರ ನೇತೃತ್ವದಲ್ಲಿ ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ತಂಡದಲ್ಲಿ ಇವರು ಭಾಗವಹಿಸಿದ್ದರು. ಅಥಣಿ ಬಸ್ ಸ್ಟಾಂಡಿನಲ್ಲಿ ಹೋರಾಟಗಾರರ ತಂಡದಲ್ಲಿದ್ದಾಗ ಪೊಲೀಸರು ಇವರನ್ನು ಬಂಧಿಸಿದರು. ಪೋಲಿಸರು ನಂತರ ಇವರನ್ನು, ಬೆಳಗಾವಿಯ ಹಿಂಡಲಗಾ ಜೇಲಿಗೆ

ವರ್ಗಾಯಿಸಿದರು. ಚಳುವಳಿಯಲ್ಲಿ ತೊಡಗಿದ ಮಗನನ್ನು, ಪೋಲಿಸರು ಬಂಧಿಸಿ ಬೆಳಗಾವಿಯ ಹಿಂಡಲಗಾ ಜೈಲಿಗೆ ವರ್ಗಾಯಿಸಿದ ಸುದ್ದಿ ಇವರ ತಾಯಿ ಸತ್ಯೆವ್ವಳಿಗೆ ತಿಳಿಯಿತು. ತಾಯಿಯ ಹೃದಯ ಬಹಳಷ್ಟು ವೇದನೆ ಅನುಭವಿಸಿತು. ಕೊನೆಗೊಂದು ದಿನ, ಆ ಚಿಂತೆಯಲ್ಲಿಯೇ ಕಾಲವಶವಾದಳು.

ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದಲ್ಲಿ, ಸ್ಪೇಶಲ ಕೇಸ ನಂಬರ ೧/೧೯೪೩ ದಾಖಲಾಯಿತು. ಸು ೫-೬ ತಿಂಗಳುಗಳವರೆಗೆ ನ್ಯಾಯವಿಚಾರಣೆ ನಡೆದು, ದಿನಾಂಕ ३೧-೦३-೧೯೪३ರಂದು ಮಾಡಲಾದ, ಆದೇಶದಲ್ಲಿ ಇವರನ್ನು ನಿರಪರಾಧಿಗಳೆಂದು ಬಿಡುಗಡೆ ಮಾಡಲಾಯಿತು. ವಿಚಾರಣೆಯ ಸಮಯದ ೬ ತಿಂಗಳವರೆಗೆ ಇವರು ಸೆರೆಮನೆವಾಸವನ್ನು ಅನುಭವಿಸ ಬೇಕಾಯಿತು.

ಜೈಲಿನಿಂದ ಬಿಡುಗಡೆಯಾದ ನಂತರವು ಹೋರಾಟವನ್ನು ಮುಂದುವರೆಸಿದರು. ಅಲ್ಲದೇ ಅನೇಕ ವಿಧ್ವಂಸಕ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗಿಗಳಾಗಿ, ಭೂಗತರಾಗಿಯೇ ಕಾರ್ಯಚರಣೆಯನ್ನು ಮಾಡಿದರು. ಗ್ರಾಮದ ಕಾಂಗ್ರೇಸ್ಸ ಕಮೀಟಿಯ ಸದಸ್ಯರಾದ ಇವರು, ತಾಲೂಕಾ ಮತ್ತು ಜಿಲ್ಲಾ ಕಾಂಗ್ರೇಸ್ಸ ನಾಯಕರ ಜೊತೆ ನೇರ ಸಂಪರ್ಕವನ್ನು ಹೊಂದಿದ್ದರು.

ಅಣ್ಣುಗುರೂಜಿ, ವಾಮನರಾವ ಬಿದರಿ, ವೆಂಕರೆಡ್ಡಿ ಹೂಲಿ, ಶ್ರೀರಂಗ ಕಾಮತ, ಉದ್ದಪ್ಪ ಎತ್ತಿನಮನಿ, ನೀಲಪ್ಪಾ ಬಸ್ತವಾಡ, ಶಿವಪ್ಪ ನಿಂಗನೂರೆ, ಅಪ್ಪಣಗೌಡ ಪಾಟೀಲ, ಬೈಲಹೊಂಗಲದ ಗಣಪತಿ ಯಲಿಗಾರ. ದತ್ತು ಯಲಿಗಾರ, ಮುಂತಾದ ನಾಯಕರ ಜೊತೆ ನೇರ ಮತ್ತು ನಿಕಟ ಸಂಪರ್ಕವನ್ನು ಹೊಂದಿದ್ದರು.

**ಸ್ವಾತಂತ್ರ್ಯ ನಂತರದ ಜೀವನ :**

ಇವರು ಸ್ವಾತಂತ್ರ್ಯ ನಂತರದಲ್ಲಿ ಮನೆತನದ ಮೂಲ ಉದ್ಯೋಗವಾದ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬೈಲಹೊಂಗಲದ ಈರವ್ವ ಎಂಬುವವರ ಜೊತೆ ೧೯೫೦ರಲ್ಲಿ ಇವರ ವಿವಾಹ ಹಿಡಕಲ್ಲದಲ್ಲಾಯಿತು. ಇವರಿಗೆ, ಸುನಂದಾ ಮತ್ತು ಶೋಭಾ ಎನ್ನುವ ಎರಡು ಹೆಣ್ಣು ಮಕ್ಕಳು ಮತ್ತು ದಯಾನಂದ ಎಂಬ ಒಬ್ಬ ಗಂಡು ಮಗ.

**ಕೊನೆಯ ದಿನಗಳು :**

ಇವರು ೧೯೬೦ರಲ್ಲಿ ಮರಣ ಹೊಂದಿದರು. ಸರ್ಕಾರದಿಂದ ದೊರೆಯುವ ಪಿಂಚಣಿ ಸೌಲಭ್ಯಕ್ಕೆ ಅರ್ಜಿ ಹಾಕಿರಲಿಲ್ಲ. ಇವರ ಮರಣಾನಂತರ, ಇವರ ಪತ್ನಿ ಪಿಂಚಣಿ ಸೌಲಭ್ಯ ಪಡೆಯಲು ಅರ್ಜಿ ಹಾಕಿ, ೧೯೭೫ ರಲ್ಲಿ ೭೫/- ರೂ. ಗಳ ತಿಂಗಳ ಪಿಂಚಣಿ ಪಡೆದುಕೊಂಡರು. ಇವರು ೧೯೯೯ರಲ್ಲಿ ದೈವಾಧೀನರಾದರು.

## ೨.೯. ಬಸಪ್ರಭು ದುಂಡಪ್ಪ ದಲಾಲ ಉರ್ಫ ವಾಣಿ

**ಜನನ :**

ತಂದೆ ದುಂಡಪ್ಪ, ವೃತ್ತಿಯಿಂದ ವ್ಯಾಪಾರಸ್ಥರು, ತಾಯಿ ಬಾಗಮ್ಮ. ಈ ದಂಪತಿಗಳಿಗೆ ಒಟ್ಟು ಐದು ಜನ ಮಕ್ಕಳು. ಬಸಪ್ರಭು ಮತ್ತು ಚಂದ್ರಶೇಖರ ಎಂಬ ಇಬ್ಬರು ಗಂಡು ಮಕ್ಕಳು, ದುಂಡವ್ವ, ಬೋರವ್ವ ಮತ್ತು ಗುರುಶಾಂತವ್ವ ಎಂಬ ಮೂರು ಜನ ಹೆಣ್ಣು ಮಕ್ಕಳು. ಮೊದಲನೆಯ ಮಗನೇ ಬಸಪ್ರಭು. ಅಥಣಿ ತಾಲೂಕಿನ ಇಂಗಳಗಾಂವದಲ್ಲಿ ಸುಮಾರು ಕ್ರಿ.ಶ. ೧೯೨೦ರಲ್ಲಿ ಇವರು ಜನಿಸಿದರು.

**ಮನೆತನದ ಹಿನ್ನೆಲೆ :**

ದುಡಂಪ್ಪನವರು, ತಮ್ಮೂರಲ್ಲಿ ಉದ್ಯೋಗದಲ್ಲಿ ಯಶಸ್ಸು ಕಾಣಲಿಲ್ಲ. ತಮ್ಮ ಊರಿಗಿಂತ ಇದೇ ಹೆಂಡತಿಯ ತವರು ಮನೆಯಾದ ಹಿಡಕಲ್ಲ ತಮ್ಮ ವೃತ್ತಿಗೆ ಅನುಕೂಲಕರ ಎಂದು ತಿರ್ಮಾನಿಸಿ ಕುಟುಂಬದೊಂದಿಗೆ ಬಂದು ನೆಲೆಸಿದರು. ಮುಂದೆ ಅದೇ ಊರಿನ ಖಾಯಂ ನಿವಾಸಿಯಾಗಿ ಕಿರಾಣಿ ವ್ಯಾಪಾರ ಮುಂದುವರೆಸಿದರು.

**ಶಿಕ್ಷಣ :**

೧ರಿಂದ ೫ನೇ ತರಗತಿಯವರೆಗಿನ ಶಿಕ್ಷಣವನ್ನು ಇಂಗಳಗಾಂವದಲ್ಲಿ, ೬ ಮತ್ತು ೭ ನೇ ತರಗತಿಗಳ ವ್ಯಾಸಂಗವನ್ನು ಹಿಡಕಲ್ಲದಲ್ಲಿ ಪೂರೈಸಿದರು. ಅರಭಾವಿ ಮಠದ ವಸತಿ ನಿಲಯದಲ್ಲಿದ್ದುಕೊಂಡು, ಹೈಸ್ಕೂಲ ವಿದ್ಯಾಭ್ಯಾಸವನ್ನು ಗೋಕಾಕ ಪಟ್ಟಣದಲ್ಲಿ ಮಾಡಿದರು. ಗೋಕಾಕದಲ್ಲಿದ್ದಾಗ ಸ್ವಾತಂತ್ರ್ಯ ಹೋರಾಟಗಾರರ ಸಂಪರ್ಕ ಮತ್ತು ಪ್ರಭಾವಗಳು ಇವರನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುವಂತೆ ಪ್ರೇರೆಪಿಸಿದವು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಇವರು, ಶಂಕರ ಪತ್ತಾರ ಮತ್ತು ಲಕ್ಷ್ಮಣ ಡಾಂಗೆ ಯವರ ಜೊತೆ ನಿಕಟ ಸಂಪರ್ಕವನ್ನು ಹೊಂದಿದ್ದು ಚಳುವಳಿಯಲ್ಲಿ ಒಂದುಗೂಡಿ ಕೆಲಸ ಮಾಡುತ್ತಿದ್ದರು. ಅಣ್ಣೂಗೂರುಜಿ, ವೆಂಕರೆಡ್ಡಿ ಹೂಲಿ, ಶ್ರೀರಂಗ ಕಾಮತ್, ಯಮನಪ್ಪ ಅರಭಾಂವಿ, ಉದ್ದಪ್ಪ ಎತ್ತಿನಮನಿ, ಅನಂತ ಕುಲಕರ್ಣಿ ಮತ್ತು ಅಕ್ಕ-ತಂಗೇರಹಳ್ಳ, ಪೂನಾ, ಮುಂಬೈಗಳಲ್ಲಿರುವ ಪ್ರಮುಖ ಹೋರಾಟಗಾರರ ಜೊತೆ ನೇರ ಮತ್ತು ನಿಕಟ ಸಂಪರ್ಕವನ್ನು ಹೊಂದಿದ್ದರು. ಸುಭಾಷ ಚಂದ್ರ ಬೋಸರ್ ಪ್ರಭಾವಕ್ಕೆ ಒಳಗಾಗಿದ್ದು, ತೀವ್ರಗಾಮಿ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದರು. ಇವರಲ್ಲಿ ಎರಡು ದೇಶಿಯ ಪಿಸ್ತೂಲಗಳಿದ್ದವು.

ಇವರು ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ ಚಳುವಳಿಯಲ್ಲಿ ಭಾಗವಹಿಸಿದ್ದರು. ಕುಡಚಿ-ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ್ ಮತ್ತು

ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ ಕಾರ್ಯದಲ್ಲಿ ಭಾಗಿಯಾಗಿದ್ದರು. ಕತ್ತಿರಿಸಿದ ತಾರತಂತಿಯನ್ನು ಹೊತ್ತುಕೊಂಡು ಮನೆಗೆ ತಂದರು. ಪೋಲಿಸರು ತಂಡ, ಶೋಧ ಕಾರ್ಯ ಕೈಕೊಂಡಾಗ ಇವರ ತಾಯಿ ಬಟ್ಟೆ ತೊಳೆಯುವ ನೆಪದಲ್ಲಿ ತಾರತಂತಿಯನ್ನು ಮನೆಯಿಂದ ಉಪಾಯವಾಗಿ ಸಾಗಿಸಿ ಬಂದೆರಗಿದ ಅಪಾಯದಿಂದ ಪಾರಾದರು. ಯಲ್ಪಾರಟ್ಟಿ ಬಂಗಲೆ ಸುಟ್ಟು ಹಾಕುವ, ಗ್ರಾಮದ ತರುಣ ಹೋರಾಟಗಾರರ ತಂಡದಲ್ಲಿ ಭಾಗವಹಿಸಿದ್ದರು. ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೆ ಸ್ಟೇಷನ ಸುಡುವ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೆ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

ಇಮಾಮಸಾಹೇಬರ ನೇತೃತ್ವದಲ್ಲಿ ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟ ಮಾಡುವ ತಂಡದಲ್ಲಿದ್ದಾಗ, ಅಥಣಿ ಬಸ್ ಸ್ಟಾಂಡಿನಲ್ಲಿ ಪೊಲೀಸರು ಬಂಧಿಸಿ, ಬೆಳಗಾವಿಯ ಹಿಂಡಲಗಾ ಜೈಲಿಗೆ ವರ್ಗಾಯಿಸಿದರು.

ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದ ಕೇಸ ನಂ ೧/೧೯೪೩ರ, ದಿನಾಂಕ ೩೧-೦೩-೧೯೪೩ರ ಆದೇಶದಲ್ಲಿ ಇವರನ್ನು ನಿರಪರಾಧಿಗಳೆಂದು ಬಿಡುಗಡೆ ಮಾಡಲಾಯಿತು. ನ್ಯಾಯವಿಚಾರಣೆಯ ೬ ತಿಂಗಳವರೆಗೆ ಇವರು ಸೆರೆಮನೆವಾಸದಲ್ಲಿದ್ದರು.

**ಸ್ವಾತಂತ್ರ್ಯ ನಂತರದ ಜೀವನ :**

ಸ್ವಾತಂತ್ರ್ಯಾನಂತರದಲ್ಲಿ ಅಣ್ಣವ್ವ ಎನ್ನುವರ ಜೊತೆ ಮದುವೆಯಾಯಿತು. ವಿವೇಕ, ಅರವಿಂದ, ಇವರಿಗೆ ಮಲ್ಲಪ್ಪ ಎಂಬ ಮೂರು ಜನ ಗಂಡು ಮಕ್ಕಳು ಮತ್ತು ದಾನಮ್ಮ ಎಂಬ ಹೆಣ್ಣು ಮಗು. ವಿವೇಕ ವೃತ್ತಿಯಿಂದ ಡಾಕ್ಟರರಾಗಿ ಕುವೈತನಲ್ಲಿ, ಅರವಿಂದ ಮತ್ತು ಮಲ್ಲಪ್ಪ ವೃತ್ತಿಯಿಂದ ಇಂಜನೀಯರಾಗಿ ಅಮೇರಿಕಾದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಸ್ವಾತಂತ್ರ್ಯಾನಂತರ ನೌಕರಿಯನ್ನು ಪಡೆದುಕೊಂಡು, ಕುಮಟಾದ ಬಿ.ಡಿ.ಓ ಕಛೇರಿಯಲ್ಲಿ ಆರ್ಗನೈಜರಾಗಿ, ಬಡ್ತಿಯನ್ನು ಹೊಂದಿ, ಬಿ.ಡಿ.ಓ. ಆಗಿ ನೇಮಕಗೊಂಡು ಗೋಕಾಕ, ಸವದತ್ತಿಗಳಲ್ಲಿ ಸೇವೆ ಸಲ್ಲಿಸಿದರು.

**ಕೊನೆಯ ದಿನಗಳು :**

ಸವದತ್ತಿಯಲ್ಲಿರುವಾಗ ನಿವೃತ್ತಿಗೆ ಎಡರು ವರ್ಷದ ಪೂರ್ವದಲ್ಲಿಯೇ ಮರಣ ಹೊಂದಿದರು. ಸ್ವಾತಂತ್ರ್ಯ ಚಳುವಳಿಯ ಪಿಂಚಣಿಯನ್ನು ಪಡೆದುಕೊಳ್ಳುತ್ತಿದ್ದರು. ಸದ್ಯ ಆ ಪಿಂಚಣಿಯು ಅವರ ಧರ್ಮಪತ್ನಿ ಅಣ್ಣವ್ವರು ಪಡೆದುಕೊಳ್ಳುತ್ತಿದ್ದಾರೆ. ಸದ್ಯ ಅವರು ಬೆಳಗಾವಿಯಲ್ಲಿ ನೆಲೆಸಿರುವರು.

## ೨.೧೦. ಶಂಕರ ಬಸವಂತಪ್ಪ ಪತ್ತಾರ

**ಜನನ :**

ಬಸವಂತಪ್ಪ ಮತ್ತು ಪಾರ್ವತಿ ದಂಪತಿಗಳಿಗೆ ಶಂಕರ, ದತ್ತಾತ್ರೇಯ, ಗಣಪತಿ, ಸೀತವ್ವ, ಲಕ್ಷ್ಮೀಭಾಯಿ, ಸರಸ್ವತಿ, ಸುಬ್ಬವ್ವ, ನಾರಾಯಣ, ಕೇಶವ ಮತ್ತು ಮಾರುತಿ. ೬ ಗಂಡು ಮತ್ತು ೪ ಹೆಣ್ಣು ಒಟ್ಟು ಹತ್ತು ಜನ ಮಕ್ಕಳು. ಹಿರಿಯ ಮಗನೇ ಶಂಕರ. ಸುಮಾರು ೧೯೨೦ರ ದಶಕದಲ್ಲಿ ಹಿಡಕಲ್ಲದಲ್ಲಿ ಜನಿಸಿದರು.

**ಶಿಕ್ಷಣ :**

ಪ್ರಾಥಮಿಕ ಶಿಕ್ಷಣವನ್ನು ಗ್ರಾಮದಲ್ಲಿಯೇ ಪಡೆದು ಕೊಂಡ ಇವರು ಮೆಟ್ರಕವರೆಗೆ ವಿದ್ಯಾಭ್ಯಾಸವನ್ನು ಮಾಡಿದ್ದರು.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ರಾಮಪ್ಪಾ ಕಂಕಣವಾಡಿ ಮತ್ತು ಭೀಮಪ್ಪ ಬಡಿಗೇರರ, ಸ್ವಾತಂತ್ರ್ಯ ಹೋರಾಟ ಇವರ ಮೇಲೆ ಪ್ರಭಾವ ಬೀರಿತ್ತು. ಇವರು ಮತ್ತು ಪಕ್ಕದ ಮನೆಯ ವಾಸುದೇವ ನಾಯಕ ಹಾಗೂ ಬಸವಪ್ರಭು ದಲಾಲ ಮೂವರೂ ಕೂಡಿಕೊಂಡು ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದರು. ಈ ಅವಧಿಯಲ್ಲಿ ಇಮಾಮಸಾಹೇಬ ಮುಲ್ಲಾ, ಲಕ್ಷ್ಮಣ ಡಾಂಗೆ, ಭೀಮಾ ಕದಮ, ಮಲ್ಲಪ್ಪ ಕೊಕಟನೂರ, ಮದ್ವರಾಜ ದೇಶಪಾಂಡೆಯವರ ಜೊತೆ ಗೆಳೆತನ ಬೆಳೆದು ಮುಂದೆ ತರುಣರ ಪಡೆಯೊಂದು ರಚನೆಗೊಂಡಿತ್ತು. ಇವರ ವಿದ್ಯಾರ್ಥಿ ಜೀವನೇ ರಾಜಕೀಯ ಜೀವನವಾಗಿತ್ತು. ಹಲವು ರಾಷ್ಟೀಯ ನಾಯಕರುಗಳ ಪ್ರಭಾವಕ್ಕೆ ಒಳಗಾಗಿದ್ದು, ಮಹಾತ್ಮ ಗಾಂಧಿಜೀಯವರ ಅಹಿಂಸಾ ಮಾರ್ಗದಲ್ಲಿ ನಂಬಿಕೆಯನ್ನಿಟ್ಟವರಾಗಿದ್ದರು.

ಇವರು ಮಹಾಲಿಂಗಪೂರ ಪೋಸ್ಟ ಆಫೀಸನ್ನು ಸುಟ್ಟು ಹಾಕುವ, ಕುಡಚಿ–ಜಮಖಂಡಿ ರಸ್ತೆಯ, ಹಾರೂಗೇರಿ ಕ್ರಾಸ್ ಮತ್ತು ಯಬರಟ್ಟಿ ಮಧ್ಯದ ಟೆಲಿಗ್ರಾಫ ತಂತಿಯನ್ನು ಕತ್ತರಿಸುವ, ಯಲ್ಪಾರಟ್ಟಿ ಬಂಗಲೆ ಸುಡುವ, ಅಣ್ಣುಗುರೂಜಿಯವರ ನೇತೃತ್ವದಲ್ಲಿ ನಡೆದ ಸುಲದಾಳ ರೇಲ್ವೇ ಸ್ಟೇಷನ ಸುಡುವ ಮತ್ತು ಸಂಕೇಶ್ವರದ ಅಪ್ಪಣಗೌಡರ ನೇತೃತ್ವದಲ್ಲಿ ರಾಯಬಾಗ ರೇಲ್ವೇ ಸ್ಟೇಷನ ಸುಡುವ ಕಾರ್ಯದಲ್ಲಿಯೂ ಇವರು ಭಾಗಿಗಳಾಗಿದ್ದರು.

ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ, ಇಮಾಮಸಾಹೇಬರ ನೇತೃತ್ವದ ತಂಡದಲ್ಲಿ ಇವರು ಭಾಗವಹಿಸಿದ್ದರು. ಈ ಸುದ್ದಿ ತಿಳಿದ ಇವರ ಚಿಕ್ಕಪ್ಪ ರಾಮಚಂದ್ರ ಪತ್ತಾರ ಸಾವಳಗಿಗೆ ತಲುಪಿ, ಚಳುವಳಿಯಿಂದ

ಇವರನ್ನು ಹಿಂದಕ್ಕೆ ಕರೆದುಕೊಂಡು ಬರಲು ಪ್ರಯತ್ನಿಸಿದರು. ಆಗಲೇ ಅವರಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಕಿಚ್ಚು ಬಲಗೊಂಡಿತ್ತು, ಎಷ್ಟೇ ಪ್ರಯತ್ನಿಸಿದರು ಶಂಕರರು ಚಳುವಳಿಯಿಂದ ಹಿಂದೆ ಸರಿಯಲಿಲ್ಲ. ಚಿಕ್ಕಪ್ಪನು ಬಂದ ದಾರಿಗೆ ಸುಂಕವಿಲ್ಲದಂತೆ, ಬರಿಗೈಯಲ್ಲಿ ಊರಿನೆಡೆಗೆ ಮರಳಿದರು.

ಹೋರಾಟಗಾರರ ತಂಡದ ಜೊತೆಯಲ್ಲಿ ಅಥಣಿ ಬಸ್ ಸ್ಟಾಂಡಿನಲ್ಲಿದ್ದಾಗ ಪೊಲೀಸರು ಇವರನ್ನು ಬಂಧಿಸಿ ಬೆಳಗಾವಿಯ ಹಿಂಡಲಗಾ ಜೇಲಿಗೆ ವರ್ಗಾಯಿಸಿದರು. ಇವರನ್ನು ಒಳಗೊಂಡಂತೆ, ಇವರ ತಂಡದ ಮೇಲೆ ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದಲ್ಲಿ, ವಿಚಾರಣೆ ನಡೆದು, ದಿನಾಂಕ ೩೧-೦೩-೧೯೪೩ರಂದು ಮಾಡಲಾದ, ಆದೇಶದಲ್ಲಿ ಇವರನ್ನು ನಿರಪರಾಧಿಗಳೆಂದು ಬಿಡುಗಡೆ ಮಾಡಲಾಯಿತು. ವಿಚಾರಣೆಯ ಸಮಯದ ೬ ತಿಂಗಳವರೆಗೆ ಇವರು ಸೆರೆಮನೆವಾಸವನ್ನು ಅನುಭವಿಸ ಬೇಕಾಯಿತು.

ಜೈಲಿನಿಂದ ಬಿಡುಗಡೆಗೊಂಡ ತರುವಾಯವು, ಇವರ ಹೋರಾಟಗಳು ಮುಂದುವರೆದವು. ಗ್ರಾಮ ಮಟ್ಟದ ಕಾಂಗ್ರೇಸ್ಸ ಕಮೀಟಿಯ ಸದಸ್ಯರಾದ ಇವರು, ತಾಲೂಕಾ ಮತ್ತು ಜಿಲ್ಲಾ ಕಾಂಗ್ರೇಸ್ಸ ನಾಯಕರ ಜೊತೆ ನೇರ ಸಂಪರ್ಕವನ್ನು ಹೊಂದಿದ್ದರು.

ಸ್ವಾತಂತ್ರ್ಯ ನಂತರದಲ್ಲಿ ಇವರ ಮದುವೆ ಲಕ್ಷ್ಮೀಬಾಯಿಯವರ ಜೊತೆಯಾಯಿತು. ಇವರಿಗೆ ಮಕ್ಕಳಾಗದ ಕಾರಣ, ಕೆಲವು ವರ್ಷಗಳ ನಂತರದಲ್ಲಿ ಪದ್ದವ್ವ ಎನ್ನುವವರ ಜೊತೆ ೨ನೇ ಮದುವೆಯಾದರು. ಇವರಿಂದಲೂ ಅವರು ಮಕ್ಕಳ ಭಾಗ್ಯವನ್ನು ಪಡೆದುಕೊಳ್ಳಲಿಲ್ಲ.

ಸ್ವಾತಂತ್ರ್ಯಾ ನಂತರದಲ್ಲಿ, ಘಟಪ್ರಭಾ ಎಡದಂಡೆ ಕಾಲುವೆ ನಿರ್ಮಾಣದ ವೇಳೆ ಇವರು ದಿನಗೂಲಿಯ ಮೇಲೆ, ವರ್ಕ ಸೂಪರವೈಜರಾಗಿ ಕೆಲಸಕ್ಕೆ ಸೇರಿಕೊಂಡರು. ನಂತರದಲ್ಲಿ ಬೆಳಗಾವಿ ಡಿ.ಸಿ.ಸಿ. ಬ್ಯಾಂಕನಲ್ಲಿ ಮ್ಯಾನೇಜರಾಗಿ ಸೇವೆಗೆ ಸೇರ್ಪಡೆಗೊಂಡರು.

**ಕೊನೆಯ ದಿನಗಳು :**

ಇವರು ಡಿ.ಸಿ.ಸಿ. ಬ್ಯಾಂಕ ರಾಯಬಾಗ ಶಾಖೆಯಲ್ಲಿ, ಮ್ಯಾನೇಜರಾಗಿ ಸೇವೆ ಸಲ್ಲಿಸುತ್ತಿರುವಾಗ ಸುಮಾರು ೧೯೫೫ರಲ್ಲಿ ಮರಣವನ್ನು ಹೊಂದಿದರು. ಇವರು ಸ್ವಾಭಿಮಾನಿಗಳಾಗಿದ್ದು, ಸರ್ಕಾರದಿಂದಾಗಲೀ, ಬೇರಾವುದೇ ಸಂಘ ಸಂಸ್ಥೆಗಳಿಂದಾಗಲೀ, ತಮ್ಮ ಹೋರಾಟಕ್ಕಾಗಿ ಏನನ್ನೂ ಬಯಸಿದವರಲ್ಲ. ಸರ್ಕಾರಕ್ಕೆ ಪಿಂಚಣಿಗಾಗಿ ಅರ್ಜಿಯನ್ನು ಕೂಡ ಹಾಕಿರಲಿಲ್ಲ.

## ೨.೧೧. ಮಧ್ವರಾಜ ಬಾಳಕೃಷ್ಣ ದೇಶಪಾಂಡೆ

**ಜನನ :**

ಇವರ ತಂದೆ ಬಾಳಕೃಷ್ಣ, ತಾಯಿ ಕಮಲಾದೇವಿ. ಈ ದಂಪತಿಗಳಿಗೆ ವಾಸುದೇವ, ವಸಂತ, ಮಧ್ವರಾಜ ಎಂಬ ಮೂರು ಗಂಡು ಮಕ್ಕಳು. ಇವರು ಕ್ರಿ.ಶ. ೧೮–೦೨–೧೯೨೨ರಂದು ಹಿಡಕಲ್ಲ ಗ್ರಾಮದಲ್ಲಿ ಜನಿಸಿದರು.

**ಮನೆತನದ ಹಿನ್ನೆಲೆ :**

ಇವರ ತಂದೆ ಬಾಳಕೃಷ್ಣರು, ಗ್ರಾಮದ ಸುಮಾರು ಐದಾರು ನೂರು ಎಕರೆ ಜಮೀನದ ಜಮೀನ್ದಾರರು. ಬಾಳಕೃಷ್ಣರಿಗೆ ಆರಂಭದಿಂದಲೂ ಸ್ವಾತಂತ್ರ್ಯದ ಗೀಳು. ಪರಕೀಯರಾದ ಬ್ರಿಟಿಷರ ಅಧಿಕಾರವನ್ನು ಕಿತ್ತೊಗೆದು ಭಾರತಾಂಬೆಯನ್ನು ಸ್ವತಂತ್ರಗೊಳಿಸಬೇಕೆಂಬ ಕನಸು. ಬಾಳಕೃಷ್ಣರ ಸ್ವರಾಜ್ಯದ ಕನಸು ಸಾಕಾರಗೊಂಡಿದ್ದು, ಅವರ ಮಗ ಮಧ್ವರಾಜ ಹೋರಾಟದಲ್ಲಿ. ೧೯೨೦ಕ್ಕಿಂತ ಮುಂಚೆಯೇ ಅಥಣಿಯ ಮಾರ್ಕೆಟ್ ಯಾರ್ಡನಲ್ಲಿ ಬಾಲಕೃಷ್ಣರ ದಲಾಲಿ ಅಂಗಡಿ ಇತ್ತು. ಬಾಳಕೃಷ್ಣರು ತಮ್ಮ ಸಂಸಾರದೊಂದಿಗೆ ಹೆಚ್ಚಾಗಿ ಅಥಣಿಯಲ್ಲಿಯೇ ಇರುತ್ತಿದ್ದರು.

**ಶಿಕ್ಷಣ :**

ಇವರು ತಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಅಥಣಿಯಲ್ಲಿಯೇ ಪಡೆದು ಕೊಂಡರು. ಅಥಣಿಯ ಪರಿಸರದಲ್ಲಿ ಬೆಳೆದ ಇವರಿಗೆ ಅಲ್ಲಿನ ಸ್ವಾತಂತ್ರ್ಯದ ಹೋರಾಟದ ಸೊಂಕು ತಗುಲಿತು. ಅನೇಕ ಚಳುವಳಿಗಾರರ ಪ್ರಭಾವವು ಇವರ ಮೇಲಾಯಿತು.

ಸ್ವದೇಶಿ ಚಳುವಳಿಯ ಪ್ರಭಾವದಿಂದಾಗಿ ವಿದ್ಯಾರ್ಥಿಯಾಗಿದ್ದಾಗ, ಇವರು ತಿಗರಿಯಿಂದ ಹತ್ತಿಯ ನೂಲನ್ನು ತೆಗೆಯುವ ಕಾಯಕದಲ್ಲಿ ತೊಡಗಿದ್ದರು. ಈ ಅವಧಿಯಲ್ಲಿ ಮಹಾತ್ಮ ಗಾಂಧಿಜೀಯವರು ಅಥಣಿಗೆ ಆಗಮಿಸಿದ್ದರು. ಆಗ ಇವರನ್ನು ಸಮೀಪಕ್ಕೆ ಕರೆದು ತಲೆನೆವರಿಸಿ ಖಾದಿಧಾರಿಯಾಗಿರುವಂತೆ ಹೇಳಿ, ತಮ್ಮ ಕೈಯಲ್ಲಿದ್ದ ತಿಗರಿಯನ್ನು ಬಾಲಕನಿಗೆ ಕಾಣಿಕೆಯಾಗಿ ನೀಡಿದರು. ಆ ತಿಗರಿ ಇಂದಿಗೂ ಇವರು ಮನೆಯಲ್ಲಿ ಸಾಕ್ಷಿಯಾಗಿದೆ. ಅಂದು ಇವರು ಬಳಸಿತ್ತಿದ ಚರಕವನ್ನು ಇಂದಿಗೂ ಮನೆಯಲ್ಲಿ ಜೋಪಾನವಾಗಿದೆ.

**ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ :**

ಇವರು ಶಿಕ್ಷಣವನ್ನು ಪಡೆದುಕೊಂಡು ಹಿಡಕಲ್ಲ ಗ್ರಾಮಕ್ಕೆ ಬಂದಾಗ, ಅಂದು ರಾಮಪ್ಪ ಕಂಕಣವಾಡಿಯವರು ಸ್ವಾತಂತ್ರ್ಯ ಚಳಿವಳಿಯ ಮುಖಂಡರಾಗಿದ್ದು, ಅವರ ಸಂಪರ್ಕ ಇವರನ್ನು ಮತ್ತೂ ಚಳುವಳಿಯತ್ತ ಆಕರ್ಷಿಸಿತು. ಚಳುವಳಿಯ ನೇರ

ಕಾರ್ಯಾಚರಣೆಯಲ್ಲಿ ಇವರು ಸ್ವತಃ ಭಾಗವಹಿಸುತ್ತಿದ್ದದ್ದು ಬಹಳಷ್ಟು ಕಡಿಮೆ. ಚಳುವಳಿಕಾರರಿಗೆ ಬೇಕಾದ ಎಲ್ಲಾ ಸಹಾಯ, ಸವಲತ್ತು, ರಕ್ಷಣೆಗಳನ್ನು ನೀಡುತ್ತ, ಅವರನ್ನು ಹುರಿದುಂಬಿಸುವ ಕೆಲಸವನ್ನು ಇವರು ಮಾಡುತ್ತಿದ್ದರು. ಚಳುವಳಿಕಾರರು ಮಾಡಬೇಕಾದ ಕಾರ್ಯಕ್ರಮಗಳ ಸಂಪೂರ್ಣ ಯೋಜನೆಯ ನೀಲನಕ್ಷೆಯನ್ನು ರಾಮಪ್ಪ ಮತ್ತು ಇವರು ಕೂಡಿಕೊಂಡು ತಯಾರಿಸುತ್ತಿದ್ದರು.

ಇವರು ಅಥಣಿಯ ಡಾ॥ ತೇಲಿ ಯವರ ಜೊತೆಗೂಡಿ ಚಳುವಳಿಯಲ್ಲಿ ಕೆಲಸ ಮಾಡಿದರು. ಅಣ್ಣು ಗುರೂಜಿ, ಶ್ರೀರಂಗ ಕಾಮತ್, ವೆಂಕರಡ್ಡಿ ಹೂಲಿ, ವಾಮನರಾವ್ ಬಿದರಿ ಮತ್ತು ಕಾಂಗ್ರೇಸ ಪಕ್ಷದ ತಾಲೂಕಾ ಮತ್ತು ಜಿಲ್ಲಾ ಮುಖಂಡರ ಜೊತೆ ನಿಕಟ ಸಂಪರ್ಕ ಹೊಂದಿದ್ದರು. ಸ್ವಾತಂತ್ರ್ಯ ಸಂಗ್ರಾಮದ ಯಾವುದೇ ನಾಯಕರು ಗ್ರಾಮಕ್ಕೆ ಬಂದರೆ, ಇವರ ಮನೆಯಲ್ಲಿಯೇ ಸಭೆ ನಡೆಯುತಿತ್ತು.

ಅಣ್ಣುಗುರೂಜಿ ನೇತೃತ್ವದಲ್ಲಿ ಸುಮಾರು ೫೦ ಜನ ಸ್ವಯಂ ಸೇವಕರು ಗ್ರಾಮಕ್ಕೆ ಹರಿಜನೋದ್ದಾರದ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಂದಾಗ ಹರಿಜನ ಕೇರಿಗಳಲ್ಲಿ ಸಂಚರಿಸಿ ಸ್ವಚ್ಚತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಇವರು ಭಾಗವಹಿಸಿದ್ದರು. ಭೂಗತರಾಗಿ ಕಾರ್ಯ ನಿರ್ವಹಿಸಿತ್ತಿದ್ದ ಇವರನ್ನು ಪೊಲೀಸರು ಬಂಧಿಸಿದಲು ಹರಸಾಹಸ ಮಾಡಿದರೂ, ಸಫಲರಾಗಲಿಲ್ಲ. ಇವರಿಗೆ ೬ ತಿಂಗಳ ಶಿಕ್ಷೆಯಾಗಿತ್ತು. ಆದರೆ ನಾಲ್ಕು ತಿಂಗಳಲ್ಲಿಯೇ ಬಿಡುಗಡೆಯಾಯಿತು.

ಅಥಣಿಯ ಅನಂತ ಶಾಮರಾವ ಕುಲಕರ್ಣಿಯವರು, ೧೯೪೨ರ ಅಗಸ್ಟ ಮತ್ತು ಸಪ್ಟೆಂಬರ ತಿಂಗಳಲ್ಲಿ, ಗ್ರಾಮಕ್ಕೆ ಆಗಮಿಸಿ ಇವರ ಮನೆಯಲ್ಲಿಯೇ ಸ್ವಾತಂತ್ರ್ಯ ಹೋರಾಟಗಾರರ ಗುಪ್ತ ಸಭೆಗಳನ್ನು ನಡೆಸಿದರು.

ಇವರು, ೧೯೪೨ರ ಅಕ್ಟೋಬರ ತಿಂಗಳಲ್ಲಿ ಇಮಾಮಸಾಹೇಬ ಮುಲ್ಲಾರ ನೇತೃತ್ವದ ತಂಡ, ಅಥಣಿಯ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ಯೊಜನೆಯಲ್ಲಿ ಭಾಗವಹಿಸಿ, ಚಳುವಳಿಕಾರರ ತಂಡಕ್ಕೆ ಬೆನ್ನೆಲುಬಾಗಿದ್ದರು.

ಹೋರಾಟಗಾರರ ತಂಡ ಜೊತೆ ಅಥಣಿ ಬಸ್ ಸ್ಟಾಂಡಿನಲ್ಲಿದ್ದಾಗ ಪೊಲೀಸರು ಇವರನ್ನು ಬಂಧಿಸಿದರು. ನಂತರ ಬೆಳಗಾವಿಯ ಹಿಂಡಲಗಾ ಜೇಲಿಗೆ ವರ್ಗಾಯಿಸಿದರು. ಬೆಳಗಾವಿ ಜಿಲ್ಲಾ ಡಿವಿಜನಲ್ ಸೆಷನ ನ್ಯಾಯಾಲಯದಲ್ಲಿ, ಸ್ಪೇಶಲ ಕೇಸ ನಂಬರ ೧/೧೯೪೩ರ ದಿನಾಂಕ ೩೧-೦೩-೧೯೪೩ರಂದು ಮಾಡಲಾದ, ಆದೇಶದಲ್ಲಿ

ಇವರನ್ನು ನಿರಪರಾಧಿಗಳೆಂದು ಬಂಧ ಮುಕ್ತ ಗೊಳಿಸಲಾಯಿತು. ವಿಚಾರಣೆಯ ಸಮಯದ ೬ ತಿಂಗಳವರೆಗೆ ಇವರು ಸೆರೆಮನೆವಾಸದಲ್ಲಿದ್ದರು.

ಇವರು ಹಿಂಡಲಗಾ ಜೈಲಿನಲಿದ್ದಾಗ, ಚಿಕ್ಕೋಡಿ, ಗೋಕಾಕ, ನಿಪ್ಪಾಣಿ, ಅಥಣಿ, ರಾಮದುರ್ಗ, ಸವದತ್ತಿ, ಹುಕ್ಕೇರಿ ಮುಂತಾದ ಕಡೆಗಳಲ್ಲಿ ಬಂಧಿತರಾದ ವಿಚಾರಣಾ ಕೈದಿ ಸ್ಥಾನದಲ್ಲಿರುವ ಹೋರಾಟಗಾರರನ್ನು ಭೇಟ್ಟಿಯಾಗಲು ಸಾಧ್ಯವಯಿತು. ರಾಜ್ಯದ ಪ್ರಭಾವಿ ನಾಯಕರಾದ ಕೆ.ಎಚ್.ಪಾಟೀಲರ, ಗವಿಸಿದ್ದಪ್ಪ ಬೆಳವಡಿಯವರ ಜೊತೆ ಸಂಪರ್ಕ ಬೆಳೆಯಿತು.

**ವೈವಾಹಿಕ ಜೀವನ :**

ಇವರ ಮದುವೆ ೧೯೫೫ರಲ್ಲಿ ನಂದಾ ಎಂಬುವವರ ಜೊತೆ ಆಯಿತು. ಇವರಿಗೆ ಸಂಧ್ಯಾ, ವಂದನಾ ಎಂಬ ಎರಡು ಜನ ಹೆಣ್ಣು ಮಕ್ಕಳು ಮತ್ತು ವಿಜಯ, ರಾಜೀವ ಎಂಬ ಎರಡು ಜನ ಗಂಡು ಮಕ್ಕಳು. ವಿಜಯ ವಕೀಲರಾಗಿದ್ದು ಬೆಳಗಾವಿಯ ನ್ಯಾಯಾಲಯದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ರಾಜೀವ ಗ್ರಾಮದಲ್ಲಿದ್ದು ಕೃಷಿ ಕಾರ್ಯದಲ್ಲಿ ತೊಡಗಿದ್ದಾರೆ.

**ಸ್ವಾತಂತ್ರ್ಯ ನಂತರದ ಸಾಮಾಜಿಕ ಚಟುವಟಿಕೆಗಳು :**

ಸ್ವಾತಂತ್ರ್ಯ ನಂತರ ಗ್ರಾಮದ ಅಭಿವೃದ್ಧಿ ಕಾರ್ಯಗಳಿಗೆ ಸದಾ ಟೊಂಕ ಕಟ್ಟಿ ನಿಂತಿದ್ದರು. ಹಗಲಿರುಳು ಗ್ರಾಮಭಿವೃದ್ಧಿಯ ಚಿಂತನೆ ಮಾಡುತ್ತಿದ್ದರು. ನಾಲ್ಕು ವರ್ಷಗಳವರೆಗೆ ಸರ ಪಂಚರಾಗಿ (ಅಧ್ಯಕ್ಷರಾಗಿ) ಕಾರ್ಯ ನಿರ್ವಹಿಸಿದರು. ಗ್ರಾಮದಲ್ಲಿ ಪಡಿತರ ಕೇಂದ್ರವನ್ನು ಆರಂಭಿಸಿದ್ದರು. ಇವರು ಡಿಸ್ಟ್ರಿಕ್ಟ ರೇಶನ್ ಸಪ್ಲಾಯ ಕಮೀಟಿಯ ಒಬ್ಬ ಸದಸ್ಯರಾಗಿದ್ದರು.

ಸರ್ಕಾರದ ಧನ ಸಹಾಯದಿಂದ ಗ್ರಂಥಾಲಯವನ್ನು ಕಟ್ಟಿಸಿದರು. ಗ್ರಾಮದ ಚಾವಡಿ ಇವರಿಂದ ಕಟ್ಟಿಸಲ್ಪಟ್ಟಿತು. ಸರ್ಕಾರದಿಂದ ಅನೇಕ ಅಭಿವೃದ್ಧಿಪರ ಯೋಜನೆಗಳನ್ನು ಜಾರಿಗೆ ತರುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದರು. ಕಛೇರಿಗಳಲ್ಲಿ ಲಂಚಕ್ಕಾಗಿ ಕೈಚಾಚುವ ಅಧಿಕಾರಿಗಳಿಗೆ, ದಿಟ್ಟತನದಿಂದ ಎಚ್ಚರಿಕೆ ಕೊಟ್ಟರು. ಬ್ರಷ್ಟಾಚಾರ ಅಧಿಕಾರಿಗಳನ್ನು ಅಣ್ಣು ಗುರೂಜಿಯವರ ಸಹಾಯದಿಂದ ಬಂಧಿಸುವಲ್ಲಿ ಸಫಲರಾದರು.

**ಕೊನೆಯ ದಿನಗಳು :**

ಇವರೆಂದೂ ಪ್ರಶಸ್ತಿ ಗೌರವಗಳಿಗಾಗಿ ಹೋರಾಡಿದವರಲ್ಲ. ಇವರಿಗೆ ಭಾರತ ಮಾತೆಯ ಸೇವೆಯನ್ನು ಪ್ರಾಮಾಣಿಕವಾಗಿ ಮಾಡಿದ ಬಗ್ಗೆ ಅಭಿಮಾನ ಮತ್ತು ಹೆಮ್ಮೆ ಇದೆ. ಪ್ರಭಾವಿ ಮತ್ತು ಧೀಮಂತ ವ್ಯಕ್ತಿತ್ವ ಹೊಂದಿದ ಇವರನ್ನು ಜನಸಾಮಾನ್ಯರು ಎದುರಿಸಿ ಇಂದಿಗೂ ಮಾತನಾಡಿದ ಉದಾಹರಣೆಗಳಿಲ್ಲ. ದಿಟ್ಟ ಮತ್ತು ನೇರ ಮಾತುಗಾರರಾದ ಇವರು ಇಂದು ಇಳಿ ವಯಸ್ಸಿನ ಹೊಸ್ತಿಲಲ್ಲಿ. ಇವರು ಶತಾಯುಷಿಯಾಗಲು ಒಂದು ದಶಕ ಮಾತ್ರ

ಬಾಕಿ. ಸರ್ಕಾರದಿಂದ ಇವರಿಗೆ ಪಿಂಚಣಿ ಸೌಲಭ್ಯ ದೊರೆತ್ತಿದ್ದು, ಸದ್ಯ ತಿಂಗಳಿಗೆ ಸುಮಾರು ೧೮೦೦೦/- ರೂ.ಗಳನ್ನು ಪಡೆಯುತ್ತಿದ್ದಾರೆ.



---

## ಟಿಪ್ಪಣಿಗಳು

೧) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ. ಪುಟ- vi. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೨) ಅದೇ. ಪುಟ-v.

೩) ಅದೇ. ಪುಟ- vi.

೪) ಅದೇ. ಪುಟ- vi.

೫) ಅದೇ. ಪುಟ- vi.

೬) ಬೆಳಗಾವಿ ಡಿವಿಜನ್ ಸೆಷನ್ ನ್ಯಾಯಾಲಯ ಸ್ಪೆಷಲ್ ಕೇಸ ನಂಬರ ೧/೧೯೪೩ ಆದೇಶ ಪ್ರತಿ. ಬೆಳಗಾವಿ.

೭) ಅದೇ. ಆದೇಶ ಪ್ರತಿ. ಬೆಳಗಾವಿ.

೮) ಡಾ॥ ಸೂರ್ಯನಾಥ ಕಾಮತ್ : ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ತೃತೀಯ ಸಂಪುಟ ಪುಟ-೫೦೭. ಪ್ರಕಾಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.

೯) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ. ಪುಟ- vi. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೧೦) ಡಾ॥ ಸೂರ್ಯನಾಥ ಕಾಮತ್ : ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ತೃತೀಯ ಸಂಪುಟ ಪುಟ-೫೦೮. ಪ್ರಕಾಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.

೧೧) ಅದೇ. ಪುಟ-೫೦೮.

೧೨) ಅದೇ. ಪುಟ-೫೦೮.

೧೩) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು ಪುಟ-೩೩೭. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ ಮೂರಸಾವಿರಮಠ, ಹುಬ್ಬಳ್ಳಿ.

೧೪) ಅದೇ ಪುಟ-೩೩೭.

೧೫) ಅದೇ ಪುಟ-೩೩೭.

೧೬) ಅದೇ ಪುಟ-೩೩೭.

೧೭) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ-ಪುಟ v.

## ಅಧ್ಯಾಯ : ಮೂರು

# ಸ್ವಾತಂತ್ರ್ಯ ಚಳುವಳಿಯಲ್ಲಿ ಹಿಡಕಲ್ಲದ ಹೆಜ್ಜೆಗಳು

# ಅಧ್ಯಾಯ : ಮೂರು

# ಸ್ವಾತಂತ್ರ್ಯ ಚಳುವಳಿಯಲ್ಲಿ ಹಿಡಕಲ್ಲದ ಹೆಜ್ಜೆಗಳು

## ೩.೧. ಪ್ರವೇಶ :

ಸ್ವಾತಂತ್ರ್ಯ ಪೂರ್ವದಲ್ಲಿ, ಅಥಣಿ ತಾಲೂಕಿನ ವ್ಯಾಪ್ತಿಗೆ ಒಳಪಟ್ಟ ಹಿಡಕಲ್ಲವು ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ವಿಶಿಷ್ಟ ಕಾರ್ಯಾಚರಣೆಯ ಮೂಲಕ ತನ್ನದೇ ಆದ ಹೆಜ್ಜೆಯ ಗುರುತುಗಳನ್ನು ಇತಿಹಾಸದಲ್ಲಿ ಮೂಡಿಸಿದೆ. ಹಿಡಕಲ್ಲದ ಸ್ವಾತಂತ್ರ್ಯ ಚಳುವಳಿಯ ಕಿಚ್ಚು ಪುಟಗೊಂಡು ಆರಂಭವಾದದ್ದು ೧೯೩೦ರ ಉಪ್ಪಿನ ಸತ್ಯಾಗ್ರಹದಿಂದ. ನಂತರದ ದಿನಗಳಲ್ಲಿ ಇಂಬುಗೊಂಡ ಈ ಹೋರಾಟವು ೧೯೪೨ರ ಚಲೇಜಾವ ಚಳುವಳಿಯ ಮೂಲಕ ಸಕ್ರೀಯವಾದ ಕಾರ್ಯಾಚರಣೆಗೆ ತನ್ನನ್ನು ತೊಡಗಿಸಿಕೊಂಡು, ಸ್ವರಾಜ್ಯ ಪ್ರಾಪ್ತಿಯೊಂದಿಗೆ ಕೊನೆಗೊಂಡಿತು. ಸ್ವಾತಂತ್ರ್ಯ ಚಳುವಳಿಯ ಸಮಯದಲ್ಲಿ ಹಿಡಕಲ್ಲ ಸುತ್ತ-ಮುತ್ತಲಿನ ಹಳ್ಳಿಗಳಿಗೆ ಒಂದು ಮಾದರಿ ಹಳ್ಳಿಯಾಗಿತ್ತು. ಸ್ವಾತಂತ್ರ್ಯದ ಕಿಚ್ಚನ್ನು ಹೊತ್ತಿಸಿದ ಕೀರ್ತಿ ಈ ಗ್ರಾಮಕ್ಕಿತ್ತು.

ಸ್ವಾತಂತ್ರ್ಯ ಹೋರಾಟದ ಇಂತಹ ಸಂದರ್ಭದಲ್ಲಿ ಹಿಡಕಲ್ಲ ತುಂಬಾ ಸಕ್ರೀಯವಾಗಿತ್ತು. ಅದೊಂದು ಕಾಂಗ್ರೇಸ್ಸಿನ ಭದ್ರ ನೆಲೆಯಾಗಿ ಮಾರ್ಪಟ್ಟಿತ್ತು. ತಾಲೂಕಾ ಮತ್ತು ಜಿಲ್ಲಾ ಕಾಂಗ್ರೇಸ್ಸ ಮುಖಂಡರು ಆಗಾಗ್ಗೇ ಇಲ್ಲಿಗೆ ಬಂದು ಕಾಂಗ್ರೇಸ್ಸ ಕಹಳೆಯನ್ನು ಮೊಳಗಿಸುತ್ತಿದ್ದರು. ಅಂದು ಕಾಂಗ್ರೇಸ್ಸು ಸ್ವಾತಂತ್ರ್ಯ ಹೋರಾಟಗಾರರಿಂದ ತುಂಬಿತ್ತು, ಕಾಂಗ್ರೇಸ್ಸು ಎಂದರೆ ಚಳುವಳಿಕಾರರು, ಚಳುವಳಿಕಾರರು ಎಂದರೆ ಕಾಂಗ್ರೇಸ್ಸಿಗರು, ಎನ್ನುವಷ್ಟರ ಮಟ್ಟಿಗೆ ಕಾಂಗ್ರೇಸ್ಸು ತನ್ನನ್ನು ಗುರುತಿಸಿಕೊಂಡಿತ್ತು.

ಸ್ವಾತಂತ್ರ್ಯ ಚಳುವಳಿಯ ಹೋರಾಟದ ಚರಿತ್ರೆಯಲ್ಲಿ ಅನೇಕ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳನ್ನು ತೊರೆದು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದರು ಎನ್ನುವುದನ್ನು ಓದುತ್ತೇವೆ. ಆದರೆ ಅದನ್ನೂ ಅಕ್ಷರಶಃ ಹಿಡಕಲ್ಲದಲ್ಲಿ ಕಾಣುತ್ತೇವೆ. ಹಿಡಕಲ್ಲ ಒಂದು ಪುಟ್ಟ ಹಳ್ಳಿ. ಅದು ದೊಡ್ಡ ನಗರ ಪಟ್ಟಣಗಳ ಜೊತೆ ಅಂತಃ ಸಮೀಪದ ಸಂಪರ್ಕವನ್ನು ಇಟ್ಟುಕೊಂಡಿರಲಿಲ್ಲ. ಆದರೂ ಕೂಡ ಇಲ್ಲಿಯ ವಿದ್ಯಾರ್ಥಿಗಳು ೧೯೪೨ರ ಚಲೇಜಾವ ಚಳುವಳಿಯ ಸಂದರ್ಭದಲ್ಲಿ ಮಹಾತ್ಮ ಗಾಂಧಿಜೀಯವರ ಕರೆಗೆ ಓಗೊಟ್ಟು ಶಾಲಾ ಕಾಲೇಜುಗಳನ್ನು ತೊರೆದು, ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದರು. ಇಂತಹ ಹೋರಾಟದಲ್ಲಿ ಕೆಲವು ಹಿರಿಯರು ಹೋರಾಟದ ನೇತೃತ್ವವನ್ನು ವಹಿಸಿಕೊಂಡಿದ್ದರು.

ಒಟ್ಟು ಹಿಡಕಲ್ಲದ ಸ್ವಾತಂತ್ರ್ಯಯೋಧರ ಒಂದು ಪಡೆಯನ್ನು ಮೂರು ಭಾಗಗಳಾಗಿ ವಿಂಗಡನೆ ಮಾಡಬಹುದು. ಒಂದು ಹಿರಿಯರಿಂದ ಕೂಡಿದ ಪಡೆ, ಎರಡನೇಯದ್ದು ತರುಣರ ಪಡೆ, ಮೂರನೇಯದ್ದು ವಿದ್ಯಾರ್ಥಿಗಳದ್ದು. ಈ ಮೂರು ನೆಲೆಗಳಿಂದ ಬಂದಂತವರು ಈ ಸ್ವಾತಂತ್ರ್ಯ ಹೋರಾಟದಲ್ಲಿ ಇದ್ದರು. ಆದರೆ ಇವತ್ತು ನಮಗೆ ಹೋರಾಟದ ಚರಿತ್ರೆ ದೊರೆಯುವುದು, ಮೊದಲನೆಯ ಭಾಗದಲ್ಲಿರತಕ್ಕಂಥ ಹೋರಾಟಗಾರರಿಂದ ಹೆಚ್ಚು ಚರಿತ್ರೆ ಸಿಗುತ್ತದೆ. ಅದರಲ್ಲಿಯೂ ಇವತ್ತಿಗೂ ಕೂಡ ಕೆಲವು ಸ್ವಾತಂತ್ರ್ಯಯೋಧರು ಬದುಕಿ ಉಳಿದಿದ್ದು ನಮ್ಮ ಸುದೈವ. ಅವರ ನೇರವಾದಂತಹ ಸಂದರ್ಶನ, ಅವರ ಅನುಭವ ಕಥನ ಇವೆಲ್ಲವುಗಳನ್ನು ಆಲಿಸುವುದರ ಮೂಲಕ ಈ ಹಿಡಕಲ್ಲದ ನೆಲೆದಲ್ಲಿರುವಂತ ಸ್ವಾತಂತ್ರ್ಯ ಹೋರಾಟದ ಪ್ರಮುಖ ಸೇನಾನಿಗಳನ್ನು ಗುರುತಿಸುವುದಾಗಿದೆ.

ಹಿಡಕಲ್ಲದ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲಿ, ಹೋರಾಟ ಮಾಡಿದ ಒಟ್ಟು ಹದಿನಾಲ್ಕು ಜನ ಯೋಧರನ್ನು ಗುರುತಿಸಲಾಗಿದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಇವರೆಲ್ಲರೂ ಕಂಡು ಬಂದರುಕೂಡ, ಪ್ರಸ್ತುತ ಅಧ್ಯಯನ ಪ್ರಬಂಧವು ಸಿಮೀತ ಮಿತಿಯನ್ನು ಹೊಂದಿರುವದರಿಂದ, ಇಲ್ಲಿ ಕೆಲವೇ ಕೆಲವು ಪ್ರಮುಖ ಹೋರಾಟಗಾರರ ಬದುಕು ಹಾಗೂ ಹೋರಾಟದ ಸಾಧನೆಗಳತ್ತ ಬೆಳಕು ಚೆಲ್ಲಲಾಗಿದೆ.

## ಹಿಡಕಲ್ಲದ ಸ್ವಾತಂತ್ರ್ಯ ಸೇನಾನಿಗಳು

1) ರಾಮಪ್ಪಾ ಮುರಾರೆಪ್ಪ ಕಂಕಣವಾಡಿ
2) ಭೀಮಪ್ಪ ಚೆನ್ನಪ್ಪ ಬಡಿಗೇರ
3) ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ
4) ಲಕ್ಷ್ಮಣ ಅಣ್ಣಪ್ಪ ಡಾಂಗೆ
5) ಮೌಲಾಸಾಹೇಬ ಹುಸೇನಸಾಹೇಬ ಮುಲ್ಲಾ
6) ವಾಸುದೇವ ಅಲ್ಲಪ್ಪ ನಾಯಿಕ
7) ಭೀಮರಾವ ಮಾಯಪ್ಪ ಕದಮ
8) ಮಲ್ಲಪ್ಪ ಪರಪ್ಪ ಕೊಕಟನೂರ
9) ಬಸಪ್ರಭು ದುಂಡಪ್ಪ ದಲಾಲ
10) ಶಂಕರ ಬಸವಂತಪ್ಪ ಪತ್ತಾರ
11) ಮಧ್ವರಾಜ ಬಾಳಕೃಷ್ಣ ದೇಶಪಾಂಡೆ
12) ಭೀಮರಾಯ ರಾಯಪ್ಪ ಕಂಕಣವಾಡಿ
13) ರೇವಣ್ಣ ಬನಹಟ್ಟಿ
14) ನಿಂಗಪ್ಪ ಕೊಕಟನೂರ

ಹಿಡಕಲ್ಲದ ಸ್ವಾತಂತ್ರ್ಯ ಸೇನಾನಿಗಳ ಹೋರಾಟವೆಂದರೆ, ಸಾಂಘಿಕವಾದ ಹೋರಾಟ. ಇವರದು ವೈಯಕ್ತಿಕವಾದ ಹೋರಾಟ ಅಲ್ಲ. ಇವರು ಬೇರೆ-ಬೇರೆಯಾಗಿ ಹೋರಾಟವನ್ನು ಮಾಡಲಿಲ್ಲ. ಆರಂಭಿಕ ಹೋರಾಟಗಾರರಾದ ರಾಮಪ್ಪಾ ಕಂಕಣವಾಡಿ ಮತ್ತು ಭೀಮಪ್ಪ ಬಡಿಗೇರ ಇವರ ಆರಂಭಿಕ ಹೋರಾಟಗಳನ್ನು ಬಿಟ್ಟರೆ, ಉಳಿದಂತೆ ಇವರೆಲ್ಲರೂ ಒತ್ತೊಟ್ಟಿಗೆ ಕೂಡಿಕೊಂಡು ಹೋರಾಟ ಮಾಡಿದಂತವರು. ಹೀಗಾಗಿ ಇವರ ಹೋರಾಟದ ಚರಿತ್ರೆಯನ್ನು ಪ್ರತ್ಯೇಕವಾಗಿ ಹೇಳುವುದು ಅಥವಾ ಪರಿಗಣಿಸುವುದು ಸಾಧ್ಯವಾಗುವುದಿಲ್ಲ. ಹಿಡಕಲ್ಲದ ಸ್ವಾತಂತ್ರ್ಯ ಸೇನಾನಿಗಳ ಚರಿತ್ರೆಯಂದರೆ ಈ ಎಲ್ಲ ಜನರ ಸಾಂಘಿಕ ಹೋರಾಟದ ಚರಿತ್ರೆ.

### ೩.೨. ಹೋರಾಟದ ಹೆಜ್ಜೆಗಳು

ಹಿಡಕಲ್ಲದ ಸ್ವಾತಂತ್ರ್ಯ ಸಂಗ್ರಾಮದ ಹೆಜ್ಜೆಯ ಗುರುತುಗಳು ಪ್ರಥಮ ಬಾರಿಗೆ ಕಂಡು ಬರುವುದು ೧೯೩೦ರ ಉಪ್ಪಿನ ಸತ್ಯಾಗ್ರಹದ ಸಮಯದಲ್ಲಿ. ಗೋಕಾಕ ತಾಲೂಕಿನ ಕಂಡ್ರಟ್ಟಿ ಗ್ರಾಮದ ಉದ್ದಪ್ಪ ಕೆಂಚಪ್ಪ ಎತ್ತಿನಮನಿಯವರ ಪ್ರೇರಣೆಯಿಂದಾಗಿ ಗ್ರಾಮದಲ್ಲಿ ಸ್ವಾತಂತ್ರ್ಯ ಚಳುವಳಿಯು ಪುಟಗೊಂಡಿತು. ಉದ್ದಪ್ಪ ಕೆಂಚಪ್ಪ ಎತ್ತಿನಮನಿ ಮತ್ತು ಯಮನಪ್ಪ ಸಿದ್ದಪ್ಪ ಅರಬಾವಿಯವರು ಗೋಕಾಕ ತಾಲೂಕಿನ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಜನ ಇವರನ್ನು ಹೋರಾಟದ ಹುಕ್ಕ-ಬುಕ್ಕರೆಂದು ಕರೆಯುತ್ತಿದ್ದರು. ಉದ್ದಪ್ಪ ಎತ್ತಿನಮನಿಯವರು ತಮ್ಮ ಜೀವನವನ್ನು ಚಳುವಳಿಗೆಯೇ ಸಮರ್ಪಿಸಿಕೊಂಡಿದ್ದರು. ಇವರು ನಿತ್ಯ ನೆರೆ-ಹೊರೆಯ, ಗುರುತು ಪರಿಚಯದ ಹಳ್ಳಿ-ಹಳ್ಳಿಗೆ ಹೋಗಿ ಸ್ವಾತಂತ್ರ್ಯ ಸಂಗ್ರಾಮದ ಕಿಚ್ಚನ್ನು ಹೊತ್ತಿಸಿ ಅಲ್ಲಿ ಯೋಧರ ಪಡೆಯೊಂದನ್ನು ಕಟ್ಟಿ, ಹೋರಾಟಕ್ಕೆ ಅಣಿಗೊಳಿಸುವ ಪ್ರೇರಣಾ ಶಕ್ತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಆರಂಭದಲ್ಲಿ ಇವರ ಪ್ರಭಾವ ರಾಮಪ್ಪ ಕಂಕಣವಾಡಿಯವರ ಮೇಲೆ ಬಹಳಷ್ಟಿತ್ತು. ಹೋರಾಟಗಾರ ಉದ್ದಪ್ಪನವರ ಹೆಗಲಿ-ಹೆಗಲು ಕೊಟ್ಟು ಹಿಡಕಲ್ಲ ಮತ್ತು ಸುತ್ತ-ಮುತ್ತಲಿನ ಗ್ರಾಮಗಳಲ್ಲಿ ಕ್ರಾಂತಿಯ ಕಹಳೆಯನ್ನೂದಿದವರು ರಾಮಪ್ಪ ಕಂಕಣವಾಡಿಯವರು. ಇವರ ಹೋರಾಟದ ಫಲವಾಗಿ ಗ್ರಾಮವು ಸ್ವಾತಂತ್ರ್ಯ ಸಂಗ್ರಾಮದ ಅಗ್ನಿಕುಂಡವಾಯಿತು, ಒಂದಿಲ್ಲೊಂದು ಚಟುವಟಿಕೆಗಳ ಕಾರ್ಯಾಗಾರವಾಯಿತು.

೧೯೩೦-೩೧ರ ಚಳುವಳಿಯನ್ನು ಮಾಡುವುದರಲ್ಲಿ ರಾಯಬಾಗ ತಾಲೂಕಿನ ಪ್ರಮುಖ ಹೋರಾಟದ ಕೇಂದ್ರವಾದ ಹಿಡಕಲ್ಲ ಮುಂಚೂಣಿಯಲ್ಲಿತ್ತು. ಈ ಚಳುವಳಿಯಲ್ಲಿ ರಾಮಪ್ಪ ಮುರಾರೆಪ್ಪ ಕಂಕಣವಾಡಿ ಮತ್ತು ಭೀಮಪ್ಪ ಚೆನ್ನಪ್ಪ ಬೆಡಿಗೇರ ಇವರು ಭಾಗವಹಿಸಿದ್ದರು. ಜಿಲ್ಲೆಯಲ್ಲಿ ಈ ಆಂದೋಲನವನ್ನು ದಿನಾಂಕ ೧೩ ಎಪ್ರಿಲ ೧೯೩೦ರಿಂದ ಪ್ರಾರಂಭಿಸಲಾಯಿತು. ಸತ್ಯಾಗ್ರಹದ ಭಾಗವಾಗಿ ಹಮ್ಮಿಕೊಂಡ ಶಿಬಿರದಲ್ಲಿ ಅನೇಕ ಸತ್ಯಾಗ್ರಹಿಗಳು, ತಮ್ಮ ಹೆಸರನ್ನು ನೊಂದಾಯಿಸಿದರು. ಅಂತೆಯೇ ಈ ಇಬ್ಬರು

ಚಳುವಳಿಕಾರರು ತಮ್ಮ ಹೆಸರನ್ನು ನೊಂದಾಯಿಸಿ ಜಿಲ್ಲಾ ಮುಖಂಡರ ಜೊತೆ ವಿವಿಧ ಸ್ಥಳಗಳಿಗೆ ಹೋಗಿ ಜನಜಾಗೃತಿ ಮಾಡಿದರು.

### ೩.೩. 'ಸತ್ಯ ಶೋಧಕ ಸಮಾಜ'ದ ಘಟಕ ಸ್ಥಾಪನೆ :

೧೯ನೇ ಶತಮಾನದ ಆರಂಭದಲ್ಲಿ ಭಾರತೀಯ ಸಮಾಜವು ನಿಂತ ನೀರಿನಂತೆ ಜಡವಾಗಿತ್ತು. ಮೂಢನಂಬಿಕೆ, ಅಂಧಾನುಕರಣೆ, ಜಾತಿ ಪದ್ಧತಿ, ಅಸ್ಪ್ರಶ್ಯತೆ, ಅಸಮಾನತೆಗಳು ಸಮಾಜವನ್ನು ಅಂಧಾಕಾರದಲ್ಲಿಟ್ಟಿದ್ದವು. ವಿದ್ಯಾವಂತರು, ಬುದ್ಧಿ ಜೀವಿಗಳು ಸಮಾಜದ ಈ ಕೆಡಕುಗಳನ್ನು ಪ್ರಶ್ನಿಸಲಾರಂಭಿಸಿದರು. ಈ ಹಂತದಲ್ಲಿ ಮಹಾತ್ಮಾ ಜ್ಯೋತಿಬಾ ಫುಲೆಯವರು ಸಾಮಾಜಿಕ ಸುಧಾರಣಾ ಚಳುವಳಿಯನ್ನು ಆರಂಭಿಸಿದರು. ಪರಿಣಾಮವಾಗಿ ಅಂದು ಪೂನಾದಲ್ಲಿಯೇ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಸಂಘಟನೆಗಳು ಹುಟ್ಟಿಕೊಂಡು, ಅವುಗಳ ಮಧ್ಯೆ ಸಂಘರ್ಷವೇರ್ಪಟ್ಟಿತು.

ಈ ಸಂಘರ್ಷದ ಅವಧಿಯಲ್ಲಿ ಮಹಾತ್ಮಾ ಜ್ಯೋತಿಬಾ ಫುಲೆಯವರಿಂದ ಪೂನಾದಲ್ಲಿ ಬ್ರಾಹ್ಮಣೇತರರ ಸಂಘಟನೆಯಾಗಿ ಕ್ರಿ.ಶ. ೧೮೭೩ರಲ್ಲಿ 'ಸತ್ಯ ಶೋಧಕ ಸಮಾಜ' ಹುಟ್ಟಿಕೊಂಡಿತು. ಮಾನವ ಹಕ್ಕುಗಳನ್ನು ಮತ್ತು ಶೋಷಣೆಗೊಳಗಾದ ಜನರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡಲು ಈ ಸಮಾಜವು ಶ್ರಮಿಸಿತು. ಜಾತಿಯ ತಾರತಮ್ಯ ಮಾಡದೆ ಎಲ್ಲರಿಗೂ, ಎಲ್ಲ ಹಕ್ಕು ಬಾಧ್ಯತೆಗಳನ್ನು ಒದಗಿಸಬೇಕೆಂದು ಚಳುವಳಿ ನಡೆಸಿತು. ಬಾಲ್ಯ ವಿವಾಹ ಮತ್ತು ವಿಧವೆಯರ ಶೋಷಣೆಯ ವಿರುದ್ಧ ಸಂಘಟಿತ ಸಮರ ಸಾರಿತು. ಶೂದ್ರ ಮತ್ತು ಅತಿಶೂದ್ರರು ಅನುಭವಿಸುತ್ತಿದ್ದ ಗುಲಾಮಗಿರಿಯನ್ನು ಉಗ್ರವಾಗಿ ಖಂಡಿಸಿತು. ಬಡ ರೈತರ ಜೀವನ, ಸ್ಥಾನಮಾನ ಉತ್ತಮ ಪಡಿಸಲು ಈ ಸಮಾಜವು ಹೋರಾಟ ನಡೆಸಿತು. ಇಂತಹ ಬ್ರಾಹ್ಮಣೇತರ ಸಂಘಟನೆಯ ಒಂದು ಘಟಕ ಹಿಡಕಲ್ಲದಲ್ಲಿ ಆರಂಭವಾಗಿತ್ತೆಂಬುದು, ಈ ನಾಡು ಅಂದು ಎಷ್ಟರ ಮಟ್ಟಿಗೆ ಕ್ರೀಯಾಶೀಲವಾಗಿತ್ತು ಎಂಬುದನ್ನು ಧೃಡಪಡಿಸುತ್ತದೆ.

ಮಹಾತ್ಮಾ ಜ್ಯೋತಿಬಾ ಫುಲೆಯರು ಆರಂಭಿಸಿದ ಸಾಮಾಜಿಕ ಸುಧಾರಣೆಯ ಚಳುವಳಿಯನ್ನು ಪೂನಾದಲ್ಲಿನ ಬ್ರಾಹ್ಮಣರೂ ಕೂಡ ಟೀಕೆ ಮಾಡುತ್ತಿದ್ದರು. ಆದರೆ ಈ ಸಮಾಜಸುಧಾರಣೆಯ ಲಾಭ, ಅವರಿಗರಿವಿಲ್ಲದೆಯೇ ಬ್ರಾಹ್ಮಣರಿಗೂ ತಟ್ಟಿತು. ಇಲ್ಲಿಯೂ ಕೂಡ ಜ್ಯೋತಿಬಾ ಫುಲೆಯವರ ಸಂಘಟನೆಯ ಒಂದು ಕಿಡಿ, ಹಿಡಕಲ್ಲ ನೆಲೆದಲ್ಲಿ ಹೊತ್ತಿಕೊಂಡಿತ್ತು ಎನ್ನುವುದೇ ಒಂದು ಆಶ್ಚರ್ಯ.

ಸು. ೧೯೨೦ರ ದಶಕವು ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಸಂಘರ್ಷಗಳು ಜಾರಿಯಲ್ಲಿದ್ದ ಕಾಲ. ಈ ಸಂದರ್ಭದಲ್ಲಿ ಸು. ೧೯೨೦ರ ದಶಕದಲ್ಲಿ, ಹಿಡಕಲ್ಲ ಗ್ರಾಮದಲ್ಲಿ 'ಸತ್ಯ ಶೋಧಕ ಸಮಾಜ' ಆರಂಭಗೊಂಡಿತು. ಬ್ರಾಹ್ಮಣೇತರ ಸಂಘಟನೆಯಾಗಿ ಆರಂಭವಾದ

ಈ ಸಂಘಟನೆಯು ಗ್ರಾಮದಲ್ಲಿನ ದೇಶಪಾಂಡೆ ಮನೆತನಕ್ಕೆ ಸೇರಿದ ಹಗೆಗಳನ್ನು ಲೂಟಿ ಮಾಡಿ, ಧವಸ-ಧಾನ್ಯಗಳನ್ನು ಊರಿನ ಜನತೆಗೆ ಹಂಚಿತು. ಬರಗಾಲದ ಬವಣೆಯಲ್ಲಿದ್ದ ಜನತೆಯ ಲೂಟಿ ಕಾರ್ಯವನ್ನು ಆರಂಭದಲ್ಲಿ ತಡೆಯುವುದು ಕಷ್ಟಕರವಾಗಿತ್ತು. ತಮ್ಮ ಆಸ್ತಿ-ಪಾಸ್ತಿಗಳ ಮೇಲಾದ ಈ ದಾಳಿಯನ್ನು ನಿಯಂತ್ರಿಸಲು, ಬಾಳಕೃಷ್ಣ ದೇಶಪಾಂಡೆಯವರು ಬಹಳಷ್ಟು ಹೆಣಗಾಡ ಬೇಕಾಯಿತು. ದಾಳಿ ದಿನಕ್ಕೊಂದು ಸ್ವರೂಪ ಪಡೆದು ಕೊಳ್ಳಹತ್ತಿತು. ಅದು ಅಲ್ಪ ಸಮಯದಲ್ಲಿ ನಿಲ್ಲುವ ಸೂಚನೆಗಳು ಕಂಡು ಬರಲಿಲ್ಲ. ಅಂದು ಗ್ರಾಮದಲ್ಲಿ ಬ್ರಾಹ್ಮಣೇತರರ ಸಂಘಟನೆಯ ನಾಯಕತ್ವವನ್ನು ಕೊಕಟನೂರ ಮನೆತನದ ಹಿರಿಯರೊಬ್ಬರು ವಹಿಹಿಕೊಂಡಿದ್ದರು.

ಗ್ರಾಮದಲ್ಲಿ ಕಂಡು ಬಂದ ಬ್ರಾಹ್ಮಣ, ಬ್ರಾಹ್ಮಣೇತರ ಸಂಘರ್ಷವನ್ನು ಮತ್ತು ಕಾಳು-ಕಡಿ, ಧನ-ಧಾನ್ಯಗಳನ್ನು ಲೂಟಿ ಮಾಡುವ ಕಾರ್ಯ ಬಹು ಬೇಗನೇ ನಿಯಂತ್ರಿಸುವಲ್ಲಿ ಬಾಳಕೃಷ್ಣ ದೇಶಪಾಂಡೆಯವರು ಯಶಸ್ವಿಯಾದರು. ಜಿಲ್ಲಾ ಕಾಂಗ್ರೇಸ ಸಂಘಟನೆಯೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದ ಇವರು, ಪೋಲಿಸ ಪಡೆಯನ್ನು ಗ್ರಾಮಕ್ಕೆ ತಂದು ತಮ್ಮ ಆಸ್ತಿ-ಪಾಸ್ತಿಗಳಿಗೆ ಸೂಕ್ತ ರಕ್ಷಣೆ ಒದಗಿಸುವಲ್ಲಿ ಯಶಸ್ವಿಯಾದರು. ಇದೇ ಸಮಯದಲ್ಲಿ ಗ್ರಾಮದ ಮುಖಂಡರಾದ ರಾಮಪ್ಪ ಕಂಕಣವಾಡಿಯವರ ನೇತೃತ್ವದಲ್ಲಿ ಬ್ರಾಹ್ಮಣೇತರರನ್ನು ಸಮಾಧಾನಪಡಿಸುವ ಕಾರ್ಯ ನಡೆಯಿತು. ಕೆಲವು ದಿನಗಳ ವರೆಗೆ ಗ್ರಾಮದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಗುಂಪುಗಳ ಮಧ್ಯದ ಸಂಘರ್ಷದ ಹೊಗೆ ಕಂಡು ಬಂತು.

ಗ್ರಾಮದ ಪರಮಾನಂದ ಗುಡಿಯ ಹತ್ತಿರ ಬ್ರಾಹ್ಮಣ ಸಮಾಜಕ್ಕೆ ಸೇರಿದ ವೇಂಕಟೇಶ್ವರನ ಗುಡಿಯಿತ್ತು. ಈ ಗುಡಿಯಲ್ಲಿರುವ ದೇವತೆಯ ಮೂರ್ತಿಯನ್ನು ಬ್ರಾಹ್ಮಣೇತರರ ಸಂಘಟನೆಕಾರರು ಧ್ವಂಸ ಮಾಡಿದರು. ಅಲ್ಲದೇ ಬ್ರಾಹ್ಮಣೇತರರನ್ನು, ಬ್ರಾಹಣರ ಮನೆಯ ಹತ್ತಿರ ಸುಳಿಯಲು ಬಿಡಲಿಲ್ಲ. ಹೋಲದ ಉಳಿಮೆಗೆ ಮತ್ತು ಕೊಟ್ಟಿಗೆಯಲ್ಲಿದ್ದ ದನ-ಕರುಗಳ ವ್ಯವಸ್ಥೆಗೂ ಕೂಡ ಆಳು-ಕಾಳುಗಳು ದೊರೆಯದಂತೆ ನಿರ್ಬಂಧಿಸಿದರು. ಈ ಅವಧಿಯಲ್ಲಿ ಪರೋಕ್ಷವಾಗಿ ಅನೇಕ ಬ್ರಾಹ್ಮಣೇತರರ ಮನೆಗಳು ಮತ್ತು ಮನಸ್ಸುಗಳನ್ನು ದೇಶಪಾಂಡೆ ಮನೆತನದ ಬೆಂಬಲಕ್ಕೆ ನಿಂತುಕೊಂಡಿದ್ದವೆನ್ನುವುದು ವಿಶೇಷ. ಕೆಲವು ಜನರು ಯಾರಿಗೂ ತಿಳಿಯದಂತೆ ಮುಂಜಾನೆ ನಸುಕಿನಲ್ಲಿ ಮತ್ತು ಸಂಜೆ-ರಾತ್ರಿಯ ಸಮಯದಲ್ಲಿ ಬಂದು ಕೆಲಸ ನಿರ್ವಹಿಸಿ ಹೋಗುತ್ತಿದ್ದರು.

ಗ್ರಾಮದಲ್ಲಿ ಕಂಡು ಬಂದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ವರ್ಗ ಸಂಘರ್ಷವನ್ನು ಒಂದೆರೆಡು ವರ್ಷಗಳಲ್ಲಿ ನಿಯಂತ್ರಣಕ್ಕೆ ತರಲಾಯಿತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಮಧ್ಯೆ ಕಂಡು ಬಂದ ಕಂದಕವನ್ನು ಮುಚ್ಚುವ ಪ್ರಯತ್ನವನ್ನು ಊರ ಹಿರಿಯರಾದ ರಾಮಪ್ಪ ಕಂಕಣವಾಡಿಯವರ ನೇತೃತ್ವದಲ್ಲಿ ಸಂಧಾನವನ್ನು

ಏರ್ಪಡಿಸಲಾಯಿತು. ಕಾಲಾನಂತರದಲ್ಲಿ ಈ ಸಂಘರ್ಷದ ವಿಚಾರವು ಜನರ ಮನಸ್ಸಿನಿಂದ, ಮಾಸಿ ಹೋಯಿತು.

ಬ್ರಾಹ್ಮಣ ಮತ್ತು ಬ್ರಾಹ್ಮಣೇತರರು ಎನ್ನುವ ಬೇಧದಿಂದ ಕೂಡಿದ ಈ ಸಾಮಾಜಿಕ ಚಳುವಳಿ, ಸ್ವಾತಂತ್ರ್ಯ ಹೋರಾಟಕ್ಕೆ ಹಿನ್ನಡೆಯನ್ನುಂಟು ಮಾಡಬಹುದಿತ್ತು. ಅಂದು ಸಾಮಾಜಿಕ ಚಳುವಳಿಗಿಂತಲೂ, ರಾಷ್ಟ್ರೀಯ ಮನೋಭಾವನೆ ಹೆಚ್ಚು ಪ್ರಾಮುಖ್ಯವಾಗಿತ್ತು. ಎಲ್ಲರೂ ಒಂದುಗೂಡಿ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವುದು ಬಹಳ ಪ್ರಮುಖವಾದ ಗುರಿಯಾಗಿತ್ತು. ಆ ದೃಷ್ಟಿಯಿಂದ ಹಿಡಕಲ್ಲ ಗ್ರಾಮದ ಊರಿನ ಪ್ರಮುಖರು ಎರಡು ಸಂಘಟನೆಗಳ ಮಧ್ಯ ರಾಜಿಮಾಡಿಸಿ ಸ್ವಾತಂತ್ರ್ಯ ಹೋರಾಟದ ಆಂದೋಲನದಲ್ಲಿ ಅವರೆಲ್ಲರನ್ನೂ ಮುಖ್ಯವಾಹಿನಿಗೆ ತರುವ ಪ್ರಯತ್ನವನ್ನು ಮಾಡುತ್ತಾರೆ. ಆವಾಗ ಬ್ರಾಹ್ಮಣ ಸಂಘಟನೆ ಮತ್ತು ಬ್ರಾಹ್ಮಣೇತರರ ಸಂಘಟನೆಗಳು ಎರಡು ಒಂದಾಗಿ, ಸ್ವಾತಂತ್ರ್ಯ ಹೋರಾಟದ ಸಂಘಟನೆಯಾಗಿ ರೂಪಗೊಂಡಿತು. ಮುಂದೆ ದೇಶಪಾಂಡೆ ಮನೆತನದ ಮಧ್ವರಾಜರು ಸ್ವಾತಂತ್ರ್ಯ ಹೋರಾಟಗಾರರ ಜೊತೆಗೂಡಿ ಚಳುವಳಿಯಲ್ಲಿ ಹೆಜ್ಜೆ ಹಾಕಿದರು.

**೩.೪. ೧೯೩೦ ರ ಉಪ್ಪಿನ ಸತ್ಯಾಗ್ರಹ :**

ಮಹಾತ್ಮ ಗಾಂಧೀಜಿಯವರು ೧೯೩೦ರಲ್ಲಿ ದಂಡಿ ಉಪ್ಪಿನ ಸತ್ಯಾಗ್ರಹ ಕೈಗೊಳ್ಳುವ ಮೂಲಕ ಕಾನೂನು ಭಂಗ ಚಳುವಳಿಯನ್ನು ಆರಂಭಿಸಿದರು. ಬ್ರಿಟಿಷರು ಭಾರತದ ಉಪ್ಪಿನ ಮೇಲೆ ಅಧಿಕ ತೆರಿಗೆ ವಿಧಿಸಿದ್ದನ್ನು ಖಂಡಿಸುವುದು ಇದರ ಉದ್ದೇಶವಾಗಿತ್ತು. ಬಡ ಭಾರತೀಯರಿಗೆ ಅಗತ್ಯ ವಸ್ತುವಾದ ಉಪ್ಪನ್ನು ಕೊಳ್ಳುವುದು ಕಷ್ಟವಾಗಿತ್ತು. ಆತನ ದಿನದ ಆದಾಯ ೨ ಆಣೆಗಿಂತ ಕಡಿಮೆ. ಆದರೆ ವೈಸ್ರಾಯ್ ಆದಾಯ ೭೦೦ ರೂ! ಗಾಂಧೀಜಿ ಮಾರ್ಚ್ ೧೨, ೧೯೩೦ರಂದು ತಮ್ಮ ಸಬರಮತಿ ಆಶ್ರಮದಿಂದ ೮೦ ಜನ ಅನುಯಾಯಿಗಳೊಂದಿಗೆ ಚರಿತ್ರಾರ್ಹ ದಂಡಿಗೆ ಪಾದಯಾತ್ರೆ ಕೈಗೊಂಡರು. ೨೪ ದಿನ ೨೪೦ ಮೈಲಿ ಕ್ರಮಿಸಿ ಏಪ್ರಿಲ್ ೬ ರಂದು ಗುಜರಾತಿನ ದಂಡಿ ತಲುಪಿ ಅಲ್ಲಿ ಸಮುದ್ರದ ತೀರದಲ್ಲಿ ಕಲೆತಿದ್ದ ಉಪ್ಪನ್ನು ಕೈಗೆತ್ತಿಕೊಂಡು ಕಾನೂನು ಭಂಗ ಮಾಡಿದರು. "ಬ್ರಿಟಿಷರ ಬಂಧನಕ್ಕೆ ಭಯ ಪಡದ ಯಾರು ಬೇಕಾದರೂ ಉಪ್ಪನ್ನು ತಯಾರಿಸಬಹುದು. ಭಾರತದ ಅದೃಷ್ಟ ಹಿಡಿ ಉಪ್ಪಿನಲ್ಲದೆ. ಬ್ರಿಟಿಷರು ನಮ್ಮ ಬೆನ್ನು ಮುರಿದರೂ ಮುಷ್ಠಿ ತೆರೆಯಬಾರದು. ಒಂದೊಂದು ಕುಟುಂಬ ಒಬ್ಬೊಬ್ಬ ಸತ್ಯಾಗ್ರಹಿಯನ್ನು ಸೃಷ್ಠಿಸಬೇಕು" [೧] ಎಂದು ಗಾಂಧೀಜಿ ಕರೆಕೊಟ್ಟರು.

ಗಾಂಧೀಜಿಯ ಕರೆಯಂತೆ ದೇಶದ ನಾನಾಕಡೆ ಉಪ್ಪಿನ ಸತ್ಯಾಗ್ರಹಗಳು ನಡೆದವು. ದೇಶಾದ್ಯಂತ ಏಪ್ಪಿಲ್ ೬ ರಿಂದ ೧೨ ನ್ನು 'ಕಾನೂನು ಭಂಗ ರಾಷ್ಟ್ರೀಯ ವಾರ' ವಾಗಿ ಆಚರಿಸಲಾಯಿತು. ಅದರಂತೆ ಗಂಗಾಧರರಾವ ದೇಶಪಾಂಡೆಯವರು ಬೆಳಗಾವಿಯಲ್ಲಿ

೬ ಏಪ್ರಿಲ್ ರಂದು ಜಾಹೀರ ಸಭೆಯಲ್ಲಿ ಕಾಯ್ದೆ ಬಾಹಿರವಾಗಿ ಉಪ್ಪನ್ನು ಮಾರಿ ಸತ್ಯಾಗ್ರಹವನ್ನು ಆರಂಭಿಸಿದರು. ಸತ್ಯಾಗ್ರಹದ ಭಾಗವಾಗಿ ಹಮ್ಮಿಕೊಂಡ ಶಿಬಿರದಲ್ಲಿ ಅನೇಕ ಸತ್ಯಾಗ್ರಹಿಗಳು, ತಮ್ಮ ಹೆಸರನ್ನು ನೊಂದಾಯಿಸಿದರು. ಅಂತೆಯೇ ರಾಮಪ್ಪ ಕಂಕಣವಾಡಿ, ಭೀಮಪ್ಪ ಚೆನ್ನಪ್ಪ ಬಡಿಗೇರರು ತಮ್ಮ ಹೆಸರನ್ನು ನೊಂದಾಯಿಸಿ ಜಿಲ್ಲಾ ಮುಖಂಡರ ಜೊತೆ ವಿವಿಧ ಸ್ಥಳಗಳಿಗೆ ಹೋಗಿ ಜನಜಾಗೃತಿ ಮಾಡಿದರು.

ಉಪ್ಪಿನ ಸತ್ಯಾಗ್ರಹವನ್ನು ಜಿಲ್ಲೆಯಲ್ಲಿ ವ್ಯಾಪಕವಾಗಿ ಪ್ರಚಾರ ಮಾಡುವುದಕ್ಕಾಗಿ ಪ್ರಮುಖ ಕಾರ್ಯಕರ್ತರ ನೇತೃತ್ವದಲ್ಲಿ ಐದು ಸ್ವಯಂ ಸೇವಕರ ಪಥಕಗಳು ರಚನೆಗೊಂಡವು. ಪಾಶ್ಚಾಪೂರದ ಶ್ರೀ ಅಣ್ಣು ಗುರೂಜಿ ಮತ್ತು ಶ್ರೀ ಗುರು ಮಾಸ್ತರ ಜೇರೆ ಯವರ ನೇತೃತ್ವದಲ್ಲಿನ ಒಂದು ಪಥಕ ಅಥಣಿ, ಬಾಗಿನಾಡಿನ ಪ್ರದೇಶಗಳಲ್ಲಿ, ಹಳ್ಳಿ-ಹಳ್ಳಿಗೆ ಸಂಚಾರ ಮಾಡಿ ಉಪ್ಪಿನ ಸತ್ಯಾಗ್ರಹದ ಪ್ರಚಾರ ಕೈಗೊಂಡಿತು. ಇಂತಹ ತಂಡದಲ್ಲಿ ಸದಸ್ಯರಾಗಿ ಕ್ರೀಯಾಶೀಲತೆಯಿಂದ ಸಕ್ರೀಯವಾಗಿ ಭಾಗವಹಿಸಿದ ಶ್ರೇಯಸ್ಸು ರಾಮಪ್ಪ ಕಂಕಣವಾಡಿ, ಭೀಮಪ್ಪ ಚೆನ್ನಪ್ಪ ಬಡಿಗೇರರವರಿಗೆ ಸಲ್ಲುತ್ತದೆ. ಅಂತೆಯೇ ಇವರು ೧೯೩೦ ರ ಉಪ್ಪಿನ ಸತ್ಯಾಗ್ರಹವನ್ನು ತಾಲೂಕಿನಲ್ಲೆಲ್ಲಾ ಪ್ರಚಾರ ಪಡಿಸಿದರು. ಪ್ರಚಾರ ಸಮಯದಲ್ಲಿ ಪಥಕಗಳು ಗ್ರಾಮದ ಒಂದೆಡೆ ಸೇರಿ "ನೂರಾರು ಸ್ವಯಂಸೇವಕರು ಸಾಲಾಗಿ ಶಾಂತ ಗಂಭೀರ ಸ್ವರದಿಂದ ಭಾವೋತ್ಕಟ ರಾಷ್ಟ್ರ ಗೀತೆಗಳನ್ನು ಹಾಡುತ್ತ ಜನರನ್ನು ಹುರುಪಗೊಳಿಸುತ್ತ ಸಾಗುತ್ತಿದ್ದರು. ಇದರಿಂದ ಎಂಥ ಭಾವನಾಶೂನ್ಯನೂ ಸಹ ಸ್ಪೂರ್ತಿಗೊಂಡು ದೇಶದ ಸ್ವಾತಂತ್ರ್ಯಕ್ಕಾಗಿ ತಾನೂ ತನ್ನ ಪಾಲಿನ ಕರ್ತವ್ಯವನ್ನು ಪೂರೈಸಲು ಮುಂದೆ ಬರುತ್ತಿದ್ದನು".[೨]

೧೯೩೦-೩೧ರ ಚಳುವಳಿಯ ಮಾಡುವುದರಲ್ಲಿ ರಾಯಬಾಗ ತಾಲೂಕ, ಜಿಲ್ಲೆಯ ಭೂಪಟದಲ್ಲಿ ವಿಶೇಷವಾಗಿ ಗುರಿತಿಸಲ್ಪಟ್ಟಿತ್ತು. ಇದಕ್ಕೆ ಕಾರಣ ಹಿಡಕಲ್ಲ ಗ್ರಾಮದಲ್ಲಿ ಕಂಡು ಬಂದ ತೀವ್ರ ತೆರನಾದ ಚಟುವಟಿಕೆಗಳು. ಈ ಚಳುವಳಿಗಳು ತೀವ್ರ ಸ್ವರೂಪದ್ದಾಗಿದ್ದರೂ, ಇದರ ವರದಿಯನ್ನು ಪೋಲಿಸ ಪಾಟೀಲರು ಸರ್ಕಾರಕ್ಕೆ ಮಾಡಲಿಲ್ಲ. ಅಂತವರಲ್ಲಿಯೂ ದೇಶ ಸ್ವಾತಂತ್ರ್ಯವಾಗಲೆಂದು ಹೆಬ್ಬಯಕೆ ಗೋಚರವಾಗುತ್ತಿತ್ತು. ಹೀಗಾಗಿ ಈ ಚಳುವಳಿಯ ಅವಧಿಯಲ್ಲಿ ಯಾವ ಕಾರ್ಯಕರ್ತರು ಬಂಧಿತರಾಗಲಿಲ್ಲ.

### ೩.೫ ಅಣ್ಣು ಗುರೂಜಿಯವರ ಅಸ್ಪೃಶ್ಯತಾ ನಿವಾರಣಾ ಆಂದೋಲನ :

"ಗಾಂಧೀ-ಇರ್ವಿನ ಒಪ್ಪಂದದ ಪ್ರಕಾರ ಮಹಾತ್ಮ ಗಾಂಧಿಯವರು ದುಂಡುಮೇಜಿನ ಪರಿಷತ್ತಿಗಾಗಿ ಇಂಗ್ಲೆಂಡಿಗೆ ಹೋದರು. ಇನ್ನೂರು ವರ್ಷ ಪಾರತಂತ್ರ್ಯದಲ್ಲಿದ್ದು ಹತವೀರ್ಯರಾದ ಭಾರತೀಯರಲ್ಲಿ ಹೊಸ ಚೈತನ್ಯವನ್ನು ತುಂಬಿ ನಿಃಶಸ್ತ್ರ ಹಾಗೂ ಅಹಿಂಸಕ ಹೋರಾಟವನ್ನು ನಡೆಸಿ ಜಯಶೀಲರಾದ ಗಾಂಧೀಜಿಯವರನ್ನು ಜಗತ್ತೇ ಮೆಚ್ಚಿಕೊಂಡಿತು. ಭಾರತದಲ್ಲಿ ಕಾಂಗ್ರೆಸ್ಸಿನ ಪ್ರತಿಷ್ಠೆ ಬೆಳೆದದ್ದರಿಂದ ಅದರ ಏಕಮೇವ

ಪ್ರತಿನಿಧಿಯಾದ ಗಾಂಧೀಜಿಯವರ ಮಾತಿಗೆ ಬೆಲೆ ಇತ್ತು. ಜನಬೆಂಬಲದ ಪ್ರತಿಷ್ಠೆ ಇತ್ತು. ಆದರೆ ಬ್ರಿಟಿಷ ಸರಕಾರವು ಮಾತ್ರ ಗಾಂಧೀಜಿಯವರ ಯಶಸ್ಸಿನಿಂದ ಮನದಲ್ಲಿಯೇ ನೊಂದು ಕೊಂಡಿತ್ತು. ಏನಾದರೂ ಮಾಡಿ ಕಾಂಗ್ರೇಸ್ಸಿನ ಪ್ರತಿಷ್ಠೆ ಕುಗ್ಗಿಸಬೇಕು, ಗಾಂಧೀಜಿಯವರ ಪ್ರಭಾವ ಕಡಿಮೆ ಮಾಡಬೇಕು, ಎಂದು ಒಳಒಳಗೇ ಸರಕಾರವು ಯೋಚಿಸಿತ್ತು." [೩]

"ದಿನಾಂಕ ೧೩ ಅಗಸ್ಟ್,೧೯೩೨ರಂದು ಬ್ರಿಟಿಷ ಪ್ರಧಾನಿ ಮ್ಯಾಕ್ ಡೋನಾಲ್ಡರ ಜಾತಿಯ ಪ್ರತಿನಿಧಿತ್ವದ ನಿರ್ಣಯ ಹೊರಬಿತ್ತು. ಅದರಲ್ಲಿ ಹರಿಜನರಿಗೆ ಪ್ರತ್ಯೇಕ ಸ್ವತಂತ್ರ ಮತದಾರ ಸಂಘ ಕೊಡಲಾಗಿತ್ತಲ್ಲದೇ ಅವರಿಗೆ ಹೆಚ್ಚಿನ ಮತಗಳನ್ನು ಹಾಗೂ ಸಾಮಾನ್ಯ ಮತದಾರ ಸಂಘದಿಂದಲೂ ಚುನಾವಣೆಗೆ ಸ್ಪರ್ಧಿಸುವ ಹಕ್ಕನ್ನು ದಯಪಾಲಿಸಲಾಗಿತ್ತು. ಈ ನಿರ್ಣಯದಿಂದ ಹರಿಜನರನ್ನು ಹಿಂದೂ ಸಮಾಜದಿಂದ ಕಾಯಂ ಬೇರ್ಪಡಿಸುವದು ಸರಕಾರದ ದುರುದ್ದೇಶವಿತ್ತು. ಮುಸಲ್ಮಾನರಂತೆ ಹರಿಜನರನ್ನು ಪ್ರತ್ಯೇಕಿಸಿ ಅವರ ಮುಖಂಡರಾದ ಜಿನ್ನಾ, ಅಂಬೇಡಕರರಂಥವರನ್ನು ಬಗಲಿಗೆ ಹಾಕಿಕೊಂಡು ವಿಭಕ್ತ ಮತದಾರ ಸಂಘದ ಬಲದಿಂದ ಅಸೆಂಬ್ಲಿಯಲ್ಲಿ ಅವರ ಸಂಖ್ಯಾಬಲದ ಪ್ರಯೋಜನ ಪಡೆದು ಕಾಂಗ್ರೇಸ್ಸಿನ ಬಲ ಕುಗ್ಗಿಸುವ ಹಾಗೂ ಸಾಮ್ರಾಜ್ಯದ ಹಿಡಿತವನ್ನು ಭದ್ರಗೊಳಿಸುವ ಕಾರಸ್ಥಾನವನ್ನು ಬ್ರಿಟಿಷ ಸರಕಾರವು ಈ ಜಾತಿ ನಿರ್ಣಯಿದಿಂದ ಮಾಡಿತ್ತು. ಯರವಡಾ ಜೇಲಿನಲ್ಲಿದ್ದ ಗಾಂಧೀಜಿಯವರಿಗೆ ಈ ನಿರ್ಣಯ ತಿಳಿದೊಡನೆ ಅದನ್ನು ಬದಲಿಸಿಕೊಂಡು ಹಿಂದೂ ಸಮಾಜದ ಅಖಂಡತ್ವವನ್ನು ಕಾಯ್ದುಕೊಳ್ಳುವುದಕ್ಕಾಗಿ ಅವರು ಉಪವಾಸ ಮಾಡುವದಾಗಿ ಸಾರಿದರು.



ದಿನಾಂಕ ೨೦ ಸೆಪ್ಟಂಬರ ೧೯೩೨ರಂದು ಗಾಂಧೀಜಿಯವರ ಉಪವಾಸ ಸುರು ಆಯಿತು. ದೇಶದಾದ್ಯಂತ ಅತ್ಯಂತ ಗಂಭೀರ ಹಾಗೂ ಚಿಂತಾತುರತೆಯ ವಾತಾವರಣ ಪಸರಿಸಿತು. ಹೊರಗಿದ್ದ ಮುಖಂಡರು ಬಡೆದೆಬ್ಬಿಸಿದಂತೆ ಕಾರ್ಯಪ್ರವೃತ್ತರಾದರು. ಹರಿಜನ ಮುಖಂಡ ಎಮ.ಸಿ.ರಾಜಾ ಅವರು ಜಾತಿ ನಿರ್ಣಯವನ್ನು ನಿಷೇಧಿಸಿದರು". [೪]

"ಅಸ್ಪೃಶ್ಯತೆಯ ಈಗಿದ್ದ ಸ್ವರೂಪವು ಹಿಂದೂಧರ್ಮಕ್ಕೆ ಮಾನ್ಯವಿಲ್ಲ, ಅದು ಕಾಲಾಂತರದಿಂದ ನಡೆದು ಬಂದ ಕೆಟ್ಟ ರೂಢಿ, ಹಿಂದೂಧರ್ಮಕ್ಕೆ ಕಲಂಕ, ಎಂದು ಗಾಂಧೀಜಿಯವರ ಖಂಡಿತ ಅಭಿಪ್ರಾಯವಿತ್ತು. ಈ ಅಭಿಪ್ರಾಯ ತಪ್ಪೆಂದು ಯಾರಾದರೂ ಹೇಳುವವರು ಯರವಡಾ ಜೇಲಿನಲ್ಲಿ ಚರ್ಚೆಗೆ ಬರಬೇಕೆಂದು ಆಹ್ವಾನಿಸಲಾಯಿತು. ಹೀಗೆ ಯರವಡಾ ಜೇಲಿನಿಂದಲೇ ಗಾಂಧೀಜಿಯವರು ಅಸ್ಪೃಶ್ಯತಾ ನಿವಾರಣೆಯ ಪ್ರಚಾರ ಕಾರ್ಯವನ್ನು ಭರದಿಂದ ಸಾಗಿಸಿದರು. ಗಾಂಧೀಜಿಯವರ ಉಪವಾಸ ಹಾಗೂ ಅದರ ನಂತರ ದೇಶಾದಾದ್ಯಂತ ನಡೆದ ಅಸ್ಪೃಶ್ಯತಾ ನಿವಾರಣಾ ಚಳುವಳಿ ಇವುಗಳಿಂದ ಕಾಂಗ್ರೇಸ ಜನರ ಲಕ್ಷವು ಕಾಯ್ದೆಭಂಗದಿಂದ ಅಸ್ಪೃಶ್ಯತಾ ನಿವಾರಣೆಯ ಕಾರ್ಯದ ಕಡೆಗೆ ಹೊರಳಿತು."[೫]

"ಗಾಂಧೀಜಿಯ ಉಪವಾಸದ ಕಾಲಕ್ಕೆ ಬೆಳಗಾವಿ ಜಿಲ್ಲೆಯ ಕಾರ್ಯಕರ್ತರಾದ ಶ್ರೀ ವಾಮನರಾವ್ ಬಿದರಿ, ಅಣ್ಣು ಗುರೂಜಿ, ಜಯದೇವ ಕುಲಕರ್ಣಿ, ಶ್ರೀರಂಗ ಕಾಮತ, ಕೇಶವರಾವ ಗೋಖಲೆ, ಬಾಬುರಾವ ಠಾಕೂರ ಮೊದಲಾದವರು ಜಿಲ್ಲೆಯ ಬೇರೆ-ಬೇರೆ ಭಾಗಗಳಲ್ಲಿ ಕಾಲುನಡಿಗೆಯಿಂದ ಸಂಚರಿಸಿ ಹಳ್ಳಿಹಳ್ಳಿಗಳಲ್ಲಿ ಅಸ್ಪೃಶ್ಯತಾ ನಿವಾರಣೆಯ ಪ್ರಚಾರ ಮಾಡಿದರು, ಎಲ್ಲೆಡೆಯಲ್ಲಿ ಹರಿಜನರಿಗೆ ಕುಡಿಯುವ ನೀರಿನ ಬಾವಿ, ಕೆರೆ, ದೇವರ ಗುಡಿಗಳು ಮುಕ್ತವಾಗುವಂತೆ ಇವರೆಲ್ಲರೂ ಪ್ರಯತ್ನಿಸಿದರು. ಬೆಳಗಾವಿ ಪಟ್ಟಣದಲ್ಲಿ ಹರಿಜನ ಮಂದಿರ ಪ್ರವೇಶದ ಚಳುವಳಿ ನಡೆಯಿತು, ಶ್ರೀ ಅಣ್ಣು ಗುರೂಜಿ, ಜಯದೇವ ಕುಲಕರ್ಣಿಯವರು ಚಿಕ್ಕೋಡಿ, ಅಥಣಿ, ಗೋಕಾಕ, ಬೈಲಹೊಂಗಲ, ಬೆಳಗಾವಿ ಐದು ತಾಲೂಕಗಳ ಹಳ್ಳಿಗಳಿಗೆ ಕಾಲ್ನಡಿಗೆಯಿಂದ ಹೋಗಿ ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣೆಯ ಸಂದೇಶವನ್ನು ಮುಟ್ಟಿಸಿದರು."[೬] ಈ ಸಮಯದಲ್ಲಿ ಅಸ್ಪೃಶ್ಯತಾ ನಿವಾರಣೆಯ ಸಂದೇಶವನ್ನು ಹೊತ್ತು, ಅಣ್ಣು ಗುರೂಜಿಯವರ ನೇತೃತ್ವದಲ್ಲಿ ಸುಮಾರು ೫೦ ಜನ ಸ್ವಯಂ ಸೇವಕ, ಸೈಕಲ್ ಸವಾರರು ಚಡ್ಡಿ ಧರಿಸಿ ಹಿಡಕಲ್ಲ ಗ್ರಾಮಕ್ಕೆ ಬಂದಿದ್ದರು. ಆಗ ಸ್ವಯಂ ಸೇವಕರ ಜೊತೆಗೂಡಿ, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಾರ್ವಜನಿಕರು ಗ್ರಾಮದ ಹರಿಜನ ಕೇರಿಗಳಲ್ಲಿ ಸ್ವಚ್ಛತಾ ಕಾರ್ಯದಲ್ಲಿ ತೊಡಗಿದರು. ಆರಂಭದಲ್ಲಿ ಹರಿಜನ ಕೇರಿಗಳಲ್ಲಿ ಪ್ರವೇಶಮಾಡಿದ್ದು ಮುಜುಗರವನ್ನುಂಟು ಮಾಡಿತು. ಸಾಮಾನ್ಯವಾಗಿ ಉಚ್ಚ ಜಾತಿಯವರಾರು ಹರಿಜನ ಕೇರಿಗಳಲ್ಲಿ ಸಂಚರಿಸುತ್ತಿರಲಿಲ್ಲ. ಈ ಆಂದೋಲನದಲ್ಲಿ ಭಾಗಿಯಾಗಿದ್ದು ಅವರಿಗೆ ಹೊಸದೊಂದು ಅನುಭವವನ್ನುಂಟು ಮಾಡಿತು. ಅಣ್ಣು ಗುರೂಜಿ ಮತ್ತು ಸ್ವಯಂ ಸೇವಕರು, ಹರಿಜನರಿಗೆ ಕೆರೆ, ಬಾವಿ, ಶಾಲೆ, ದೇವಸ್ಥಾನಗಳನ್ನು ಮುಕ್ತವಾಗಿ ಉಪಯೋಗಿಸಲು ಅವಕಾಶ ಮಾಡಿಕೊಡುವಂತೆ ಸಾರ್ವಜನಿಕರಿಗೆ ತಿಳುವಳಿಕೆ ಹೇಳಿದರು. ಹರಿಜನರ ಉದ್ಧಾರಕ್ಕೆ ಶಿಕ್ಷಣ ಅತೀ ಅವಶ್ಯಕ, ಎಲ್ಲರೂ ಶಿಕ್ಷಣವನ್ನು ಪಡೆದುಕೊಳ್ಳುವಂತೆ ಒತ್ತುಕೊಟ್ಟು ಹೇಳಿದರು.

### ೩.೬. ಗೋಕಾಕಕ್ಕೆ ಪಂಡಿತ ಜವಹಾರಲಾಲ ನೆಹರು ಭೆಟ್ಟಿ :

"೧೯೩೭ರಲ್ಲಿ ದೇಶದಲ್ಲಿ ಬಹಳ ಕಡೆಗೆ ಗಲಭೆಗಳಾದವು. ಗೋಕಾಕದಲ್ಲಿ ಗಿರಣಿ ಮುಷ್ಕರವಾಯಿತು. ಆಗ ಕಾಮ್ರೆಡ ಎಂ. ಎಸ್. ರಾಯ್. ಮತ್ತು ಪಂಡಿತ ಜವಹಾರಲಾಲ ನೆಹರು, ಕರ್ನಾಟಕದಲ್ಲಿ ಪ್ರವಾಸ ಕೈಕೊಂಡರು. ಈ ಸಮಯದಲ್ಲಿ ಗೋಕಾಕಕ್ಕೂ ಭೇಟ್ಟಿ ಇತ್ತರು. ಆಗ ನಡೆದ ಸಭೆಯಲ್ಲಿ ಜಿಲ್ಲಾ ಮುಂದಾಳುಗಳ ನೇತೃತ್ವದಲ್ಲಿ ೨೫ ಜನರ ಸ್ವಯಂ ಸೇವಕರ ತಂಡವೊಂದು ಕಾರ್ಯಕ್ರಮದ ಯಶಸ್ವಿಗೆ ಶ್ರಮಿಸಿತು. ಆ ಸ್ವಯಂ ಸೇವಕರ ತಂಡದಲ್ಲಿ ವಾಸುದೇವ ಅಲ್ಲಪ್ಪ ನಾಯಿಕರು ಕೂಡ ಒಬ್ಬ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ಇವರ ಜೊತೆಗೆ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಗ್ರಾಮದ ಭೀಮಪ್ಪಾ ಚೆನ್ನಪ್ಪಾ ಬಡಿಗೇರ ಮೇಸ್ತ್ರಿ, ಭೀಮರಾಯ ರಾಯಪ್ಪಾ ಕಂಕಣವಾಡಿ, ರಾಮಪ್ಪಾ

ಮುರಾರೆಪ್ಪಾ ಕಂಕಣವಾಡಿ, ಇವರು ಯಾವಾಗಲೂ ನೆಹರು ಅವರ ಸುತ್ತಲೂ ಇದ್ದು ರಕ್ಷಣೆ ಮಾಡುತ್ತಿದ್ದರು". [೭]

### ೩.೭. ಶೇಡಬಾಳ ರೈಲು ನಿಲ್ದಾಣದಲ್ಲಿ ನೇತಾಜಿ ಸುಭಾಷ ಚಂದ್ರ ಬೋಸ :

೧೯೩೭ರ ಡಿಸೆಂಬರ ತಿಂಗಳಿನಲ್ಲಿ ನೇತಾಜಿ ಸುಭಾಷ ಚಂದ್ರ ಬೋಸರು ಕರ್ನಾಟಕದಲ್ಲಿ ಪ್ರವಾಸ ಕೈಕೊಂಡಿದ್ದರು. ಬೆಳಗಾವಿ ಜಿಲ್ಲೆಯಲ್ಲಿ ನೇತಾಜಿಯ ಪ್ರಯಾಣ ಬಗ್ಗೆ, ಅಥಣಿಯ ಸ್ವಾತಂತ್ರ್ಯ ಸಂಗ್ರಾಮದ ಕಿಡಿಯೆಂದೇ ಪ್ರಖ್ಯಾತರಾದ ಅನಂತ ಶ್ಯಾಮರಾವ ಕುಲಕರ್ಣಿಯವರಿಗೆ, ಒಂದು ದಿನ ಮುಂಚಿತವಾಗಿಯೇ ಗುಪ್ತ ಮಾಹಿತಿ ಬಂದಿತ್ತು. ನೇತಾಜಿಯವರು ಮರುದಿನ ಬೆಳಿಗ್ಗೆ ಬೆಳಗಾವಿಯಿಂದ ಶೇಡಬಾಳಕ್ಕೆ ಬರುವ ೮ ರ ರೈಲು ಗಾಡಿಗೆ ಬರುವವರಿದ್ದರು.

ಈ ಘಟನೆಯ ಒಂದು ದಿನ ಮುಂಚೆ ಸಾಯಂಕಾಲ, ಅನಂತ ಕುಲಕರ್ಣಿಯವರು, ಹೋರಾಟಗಾರರ ಚಟುವಟಿಕೆಗಳ ಬಗ್ಗೆ ರೂಪ-ರೇಷೆಗಳನ್ನು ತಯಾರಿಸಲು ಮತ್ತು ಮಾರ್ಗದರ್ಶನ ಮಾಡಲು, ತಾಲೂಕಿನ ಪ್ರಮುಖ ಚಳುವಳಿಗಾರರಿಗೆ ಗುಪ್ತ ಸಭೆಯೊಂದನ್ನು ತಮ್ಮ ಮನೆಯಲ್ಲಿಯೇ, ಪೂರ್ವ ಯೋಜನೆಯಂತೆ ಕರೆದಿದ್ದರು. ಅನೇಕ ಸ್ವಾತಂತ್ರ್ಯ ಯೋಧರು ಗುಪ್ತ ಸಭೆಯಲ್ಲಿ ಪಾಲ್ಗೊಂಡರು. ಈ ಸಭೆಗೆ ಹಿಡಕಲ್ಲಿದಿಂದ ವಾಸುದೇವ ಅಲ್ಲಪ್ಪ ನಾಯಿಕ ಮತ್ತು ಭೀಮಪ್ಪ ಚೆನ್ನಪ್ಪ ಬಡಿಗೇರ, ಭಾಗವಹಿಸಿದ್ದರು. ಸಭೆಯಲ್ಲಿ ಹೋರಾಟಗಾರರು ಇಲ್ಲಿಯವರೆಗೆ, ತಾವು ಮಾಡಿದ ಹೋರಾಟದ ವಿವರವನ್ನು, ಒಬ್ಬೊಬ್ಬರಾಗಿ ಒಪ್ಪಿಸಿದರು. ಸಾಯಂಕಾಲ ಆರಂಭವಾದ ಸಭೆ ರಾತ್ರಿ ೧೧-೩೦ ಗಂಟೆಯ ವರೆಗೂ ಸಾಗಿತು. ಸಭೆ ಮುಕ್ತಾಯಗೊಂಡ ನಂತರ, ಅನಂತ ಕುಲಕರ್ಣಿಯವರು, ಎಲ್ಲಾ ಹೋರಾಟಗಾರರಿಗೂ ತಮ್ಮ ಮನೆಯಲ್ಲಿ ಊಟ ತಯಾರಾಗಿದ್ದು ಎಲ್ಲರೂ ಊಟ ಮಾಡಿಕೊಂಡು, ರಾತ್ರಿಯೇ ತಮ್ಮ-ತಮ್ಮ ಊರುಗಳಿಗೆ ಮರಳಬೇಕೆಂದು ಹೇಳಿ, ಲಘು-ಬಗೆಯಿಂದ ಊಟಕ್ಕೆ ವ್ಯವಸ್ಥೆ ಮಾಡಿದರು.

ಆದರೆ ವಾಸುದೇವ ನಾಯಿಕ ಮತ್ತು ಭೀಮಪ್ಪ ಬಡಿಗೇರ ಇವರಿಗೆ, ಊಟ ಮಾಡುವುದು ಬೇಡವೆಂದು ಹೇಳಿ ಕೈಚೀಲದಲ್ಲಿ ಒಂದು ಡಜನ ಬಾಳೆಹಣ್ಣು ಹಾಕಿಕೊಂಡು ಪ್ರಯಾಣಕ್ಕೆ ತಯಾರಾಗಿಯೆಂದು ಆದೇಶಿಸಿ, ತಾವು ಕೂಡ ಊಟವನ್ನು ಮಾಡದೇ ಅವರುಗಳ ಜೊತೆ ನಡುಮಧ್ಯ ರಾತ್ರಿಯೇ ಶೇಡಬಾಳದತ್ತ ಪ್ರಯಾಣವನ್ನು ಆರಂಭಿಸಿದರು. ಕೈಚೀಲದಲ್ಲಿದ್ದ ಬಾಳೆಹಣ್ಣುಗಳನ್ನು ಮೂವರು ತಿನ್ನುತ್ತಾ ನಡೆದರು. ಇರುಳೆಲ್ಲ ಚಳುವಳಿಯ ಚಿಂತನ-ಮಂಥನದಲ್ಲಿ ದಾರಿ ಸವೆಸಿದರು. ಮುಂಜಾನೆ ಕೋಳಿ ಕೂಗುವ ಹೊತ್ತಿಗೆ ಶೇಡಬಾಳ ಸ್ಟೇಷನಗೆ ಬಂದು ತಲುಪಿದರು. ಇವರನ್ನು ಕಂಡು ಸ್ಟೇಷನ ಮಾಸ್ತರರಿಗೆ ಸಂದೇಹ. ಪ್ರಯಾಣಿಕರಂತಲ್ಲದೇ, ಚಳುವಳಿಗಾರರಂತೆ, ಇವರು ಸ್ಟೇಷನ ಮಾಸ್ತರರಿಗೆ ಗೋಚರಿಸಿದರು.

ಅನಂತ ಕುಲಕರ್ಣಿಯವರ ಹೋರಾಟದ ಬಗ್ಗೆ ಕಂಡು ಕೇಳಿದ ಅವರಿಗೆ, ಇವರ ಗುರ್ತು ಸ್ವಲ್ಪ ಮಟ್ಟಿಗೆ ಸಿಗಲಾರಂಭಿಸಿತು. ನೇರವಾಗಿ ಇವರಲ್ಲಿಗೆ ಬಂದು ಸಂಶಯವನ್ನು ನಿವಾರಿಸಿಕೊಂಡರು.

ಸ್ಟೇಷನ ಮಾಸ್ತರರಿಗೆ, ತಾನು ಅಂದುಕೊಂಡಂತೆ, ಇವರು ಅನಂತ ಕುಲಕರ್ಣಿ ಮತ್ತು ಚಳುವಳಿಗಾರರಾಗಿದ್ದ ಬಗ್ಗೆ ತಿಳಿದುಕೊಂಡು ಸಂತಸವೆನಿಸಿತು. ಸ್ಟೇಶನಗೆ ಬಂದ ಕಾರಣವನ್ನು ಕೇಳಿದರು. ಬೆಳಗಾವಿಯಿಂದ ಬರುವ ೮ ರ ರೈಲು ಗಾಡಿಗೆ ನೇತಾಜಿ ಸುಭಾಷ ಚಂದ್ರ ಬೋಸರು ಆಗಮಿಸುತ್ತಿರುವುದನ್ನು ಅನಂತ ಕುಲಕರ್ಣಿಯವರು ಸ್ಟೇಷನ ಮಾಸ್ತರರಿಗೆ ಹೇಳಿದರು. ಸ್ಟೇಷನ ಮಾಸ್ತರರು ವಿಷಯವನ್ನು ಕೇಳಿ ಪುಳಕಿತಗೊಂಡರು. ದೇಶದ ಸ್ವಾತಂತ್ರ್ಯ ಹೋರಾಟದ ದಿವ್ಯ ಚೇತನವನ್ನು ಕಂಡು ಬದುಕನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂಬ ಇಚ್ಚೆ, ಸ್ಟೇಷನ ಮಾಸ್ತರರ ಮೈ ಮನಗಳಲ್ಲಿ ಪುಟಿದೆದ್ದು ಕುಣಿಯಲಾರಂಭಿಸಿತು. ಅವರ ಸಂತೋಷಕ್ಕೆ ಪಾರವೇ ಇಲ್ಲದಾಯಿತು. ನೇತಾಜಿಯ ಸಂದರ್ಶನದ ಭಾಗ್ಯವನ್ನು ಸುತ್ತ-ಮುತ್ತಲಿನ ಜನತೆಗೆ ಒದಗಿಸಬೇಕೆಂಬ ಸದಾಶಯದಿಂದ ಸ್ಟೇಷನದಲ್ಲಿರುವ ಪ್ರಯಾಣಿಕರೆಲ್ಲರಿಗೂ ಕೂಗಿ-ಕೂಗಿ ಹೇಳಿ, ಜನರನ್ನು ಸ್ಟೇಷನಗೆ ಕರೆತರುವಂತೆ ಕೇಳಿಕೊಂಡರು. ಸಾಧ್ಯವಿದ್ದಷ್ಟು ಮಟ್ಟಿಗೆ, ಸ್ಟೇಷನದಲ್ಲಿ ಗಾಡಿ ನಿಲ್ಲಿಸುವುದಾಗಿ ಅವರಿಗೆ ಭರವಸೆಯನ್ನು ಕೊಟ್ಟರು. ಸುದ್ದಿ ಕಾಡ್ಗಿಚ್ಚಿನಂತೆ ಸುತ್ತ-ಮುತ್ತಲಿನ ಊರುಗಳಿಗೆ ಹಬ್ಬಿತ್ತು. ೮ ಗಂಟೆಯ ವೇಳೆ ನಾಲ್ಕು-ಐದುನೂರು ಜನರು ಸ್ಟೇಷನಗೆ ಬಂದು ತಲುಪಿದರು.

ಸ್ಟೇಷನಗೆ ಬಂದು ಸೇರಿದ ನೇತಾಜಿಯ ಅಭಿಮಾನಿಗಳು, ರೈಲು ಬರುವ ದಿಕ್ಕನ್ನೇ ಹುಬ್ಬೇರಿಸಿ ನೋಡುತ್ತ ನಿಂತರು. ದೂರದಲ್ಲಿಯೇ ಇದ್ದ ರೈಲು ಸಿಳ್ಳಯೊಂದಿಗೆ ತನ್ನ ಆಗಮನದ ಸಂದೇಶವನ್ನು ಮುಟ್ಟಿಸಿತು. ಜನತೆ ಕೌತುಕದಿಂದ ರೈಲಿನತ್ತ ತದೇಕ ಚಿತ್ತದಿಂದ ವಿಕ್ಷೀಸುತ್ತಿದ್ದರು. ಯಾವ ಡಬ್ಬಿಯಿಂದ ನೇತಾಜಿ ಕೆಳಗಿಳಿಯುತ್ತಾರೆ, ಎನ್ನುವ ಕಾತರದೊಂದಿಗೆ ಜನ ಹರ್ಷಾತೀರೇಕದಿಂದ ಘೋಷಣೆಗಳನ್ನು ಕೂಗುತ್ತಿದ್ದರು. ರೈಲು ಕೊನೆಗೂ ನಿಧಾನಗತಿಯಲ್ಲಿ ಸ್ಟೇಷನಗೆ ಪ್ರವೇಶಿಸಿತು. ರೈಲಿನ ಮಧ್ಯದ ಡಬ್ಬಿಯೊಂದರಿಂದ ನೇತಾಜಿ ಕೆಳಗಿಳಿದರು. ಜನರು ಒಂದು ಕ್ಷಣ ಬೆರಗಾದರು. ನೇತಾಜಿ ಎಲ್ಲರತ್ತ ಕೈಬೀಸಿದರು. ಜನರ ಘೋಷಣೆಗಳು ಮುಗಿಲು ಮುಟ್ಟಿದವು. ನೇತಾಜಿಯ ಸುತ್ತಲೂ ಹೋರಾಟಗಾರರು ಮತ್ತು ಅಭಿಮಾನಿಗಳು ಕಿಕ್ಕಿರಿದು ತುಂಬಿದರು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡುವ ದಿಕ್ಷೆತೊಟ್ಟ ಭಾರತಾಂಬೆಯ ಹೆಮ್ಮೆಯ ಪುತ್ರ, ದೇಶ ಕಂಡ ಅದ್ವಿತಿಯ ಅಪ್ರತಿಮ ಹೋರಾಟಗಾರ, ಸುಭಾಷ ಚಂದ್ರ ಭೋಸರನ್ನು ಕಂಡು ಜನತೆ ಧನ್ಯರಾದರು. ನೇತಾಜಿ ಹಿಂದಿ ಭಾಷೆಯಲ್ಲಿ ಜನತೆಯನ್ನು ಉದ್ದೇಶಿಸಿ ಭಾಷಣವನ್ನು ಆರಂಭಿಸಿದರು. ಬ್ರಿಟಿಷರ ರಾಕ್ಷಸೀ ರಾಜ್ಯ ಶಕ್ತಿಯನ್ನು ನಾಶಗೊಳಿಸಿ, ಈ ದೇಶಕ್ಕೆ ಸ್ವಾತಂತ್ರ್ಯ ತಂದು ಕೊಡಲು ಪ್ರತಿಯೊಬ್ಬನು ತ್ಯಾಗ ಬಲಿದಾನಗಳ

ಮೂಲಕ ಸಿದ್ಧನಾಗಬೇಕೆಂದು ತಮ್ಮ ಭಾಷಣದ ಮೂಲಕ ಕರೆ ಕೊಟ್ಟರು. ಭಾಷಣ ಕೇಳಿದ ಜನರ ಹರ್ಷಾತೀರೇಕಕ್ಕೆ ಮೇರೆ ಇಲ್ಲದಾಯಿತು. ನೇತಾಜಿಯನ್ನು ಕಣ್ತುಂಬ ನೋಡಿದರು, ಸಾಲದ್ದಕ್ಕೆ ಹತ್ತಿರ ಬಂದು ವಂದಿಸಿದರು, ಅವರ್‍ ಕೈಕುಲಕಿ ಸ್ಫೂರ್ತಿಯಿಂದ ಜೈಜೈಕಾರ ಹಾಕಿದರು. ಒಂದರೆಘಳಿಗೆ ರೈಲು ನಿಲ್ದಾಣ ಸ್ವಾತಂತ್ರ್ಯ ಸಂಗ್ರಾಮದ ಪ್ರೇರಣಾ ಶಕ್ತಿಯ ವೇದಿಕೆಯಾಯಿತು.

ಜನತೆ ಅವರ ದರ್ಶನ ಭಾಗ್ಯದಿಂದ ಪುಳಕಿತರಾದರು. ನೇತಾಜಿಯವರ ಸೆಕ್ರೆಟರಿ ಖೊಡವಾಡದ ಗುಡಿ ಯವರು ನೇತಾಜಿಯವರ ಉಗ್ರವಾದಿ ಹೋರಾಟಕ್ಕೆ ಬೆಂಬಲ ಸೂಚಿಸುವ ಹೋರಾಟಗಾರರ ಸಹಿಯನ್ನು, ಹೋರಾಟಗಾರರ ರಕ್ತದಿಂದಲೇ ಪಡೆಯುತ್ತಿದ್ದರು. ಗುಡಿ ಯವರು, ತಮ್ಮ ಕೈಯಲ್ಲಿದ್ದ ಪೆನ್ನಿನ ಪಂಚಧಾತುವಿನ ನಿಬ್ಬಿನಿಂದ ಸಹಿ ಮಾಡಲು ಧಾವಿಸುತ್ತಿದ್ದ ಹೋರಾಟಗಾರರ ಕೈಬೆರಳಿಗೆ ಚುಚ್ಚುತ್ತಿದ್ದರು. ಈ ಸಮಯದಲ್ಲಿ ಗುಡಿಯವರು, ಅವರ ಮುಖದ ಭಾವನೆಗಳನ್ನು ಗಮನಿಸುತ್ತಿದರು. ಯಾರ ಮುಖಗಳಲ್ಲಿ ನೋವಿನ ಅಲೆಗಳು ಕಾಣುತ್ತಿದ್ದವೋ ಅವರಿಗೆ ಸಹಿ ಮಾಡಲು ಅವಕಾಶ ನೀಡುತ್ತಿರಲಿಲ್ಲ. ಯಾರ ಮುಖದಲ್ಲಿ ಕಿಂಚಿತ್ತು ನೋವು ಕಾಣುವುದಿಲ್ಲವೋ ಅಂತವರಿಗೆ ರಕ್ತದಿಂದ ಸಹಿ ಮಾಡಲು ಹೇಳುತ್ತಿದ್ದರು. ವೀರ ಹೋರಾಟಗಾರರಿಗೆ ಕೆಚ್ಚೆದೆಯ ದೇಶಾಭಿಮಾನಿಗಳಿಗೆ ಮಾತ್ರ ಆ ಡೈರಿಯಲ್ಲಿ ಸಹಿ ಮಾಡಲು ಅವಕಾಶವಿರುತ್ತಿತ್ತು. ಹಿಡಕಲ್ಲದ ಭೀಮಪ್ಪ ಚೆನ್ನಪ್ಪ ಬಡಿಗೇರ ಇವರ ರಕ್ತದ ಸಹಿ ನೇತಾಜಿಯ ಡೈರಿಯಲ್ಲಿ ದಾಖಲಾಯಿತು.

ಅನೇಕ ಸ್ವಾತಂತ್ರ್ಯ ಪ್ರೇಮಿಗಳು ತಮ್ಮ ಬೆಂಬಲ ಸೂಚಿಸಿ, ರಕ್ತ ಸಹಿಯನ್ನು ನೇತಾಜಿಯ ಡೈರಿಯಲ್ಲಿ ಮಾಡಿದರು. ಒಂದು ಗಂಟೆಗೂ ಮೀರಿ ಸ್ಟೇಷನದಲ್ಲಿ ರೈಲನ್ನು ತಡೆಹಿಡಿದದ್ದು ಸ್ಟೇಷನ ಮಾಸ್ತರರ ಸಾಧನೆಯೇ ಆಗಿತ್ತು. ಹೆಚ್ಚು ಸಮಯದ ವರೆಗೆ ರೈಲುಗಾಡಿಯನ್ನು ಸ್ಟೇಷನದಲ್ಲಿ ನಿಲ್ಲಿಸುವಂತಿರಲಿಲ್ಲ. ಒಂದು ವೇಳೆ ನಿಲ್ಲಿಸಬೇಕಾದ ಅನಿವಾರ್ಯತೆ ಇದ್ದರೆ, ತಾರ ತಂತಿಯ ಮೂಲಕ ಮುಂದಿನ ಸ್ಟೇಷನಗಳಿಗೆ ಸುದ್ದಿ ಮುಟ್ಟಿಸ ಬೇಕಾಗುತ್ತಿತ್ತು. ಇನ್ನೂ ತಡ ಮಾಡಿದರೆ ಅವಘಡಕ್ಕೆ ಕಾರಣವಾಗಬಹುದೆಂದು ಸ್ಟೇಷನ ಮಾಸ್ತರರು ಗಾಡಿ ಹೊರಡಲು ಹಸಿರು ಬಾವುಟದ ಸಿಗ್ನಲ್ ಬೀಸಲಾರಂಭಿಸಿದರು. ರೈಲುಗಾಡಿಯು ಸಿಳ್ಳೆಯೊಂದಿಗೆ ನಿಧಾನಗತಿಯಲ್ಲಿ ಸ್ಟೇಷನ ಬಿಟ್ಟು ಚಲಿಸಲಾರಂಭಿಸಿತು.

ನೇತಾಜಿ ಸುಭಾಷ ಚಂದ್ರ ಬೋಸರು ರೈಲುಗಾಡಿಯನ್ನೇರಿ, ಬಾಗಿಲ ಬಳಿ ನಿಂತುಕೊಂಡು ಸ್ಟೇಷನದಲ್ಲಿ ನಿಂತುಕೊಂಡ ಜನತೆಯತ್ತ ಕೈಬೀಸಿದರು. ನೇತಾಜಿಯವರು ತಮ್ಮತ್ತ ಕೈಬೀಸುತ್ತ ತೆರಳುತ್ತಿದ್ದದ್ದನ್ನು ಕಂಡು ಜನರು ಕೂಡ ಅವರತ್ತ ಕೈಬೀಸಿ ಕೃತಾರ್ತರಾದರು. ಮನದಲ್ಲಿಯೇ ನೇತಾಜಿಯಂತೆ ತಾವು ದೇಶಕ್ಕಾಗಿ ಸರ್ವಾರ್ಪಣ ಗೈಯುವ ಸಂಕಲ್ಪವನ್ನು ತೊಟ್ಟರು. ಅದನ್ನು ಬಹುಮಟ್ಟಿಗೆ ಯಶಸ್ವಿಗೊಳಿಸಲು ಮನಸ್ಸಿನಲ್ಲಿಯೇ

ಪಣವನ್ನು ತೊಟ್ಟರು. ನೇತಾಜಿಯವರ ಜೊತೆ ಅನೇಕ ಮುಂಖಡರು ರೈಲುಗಾಡಿಯನ್ನು ಹತ್ತಿದರು. ಅವರ ಜೊತೆ ವಾಸುದೇವ ನಾಯಕರು ರೈಲುಗಾಡಿಯನ್ನೇರಿದರು.

"ಸ್ಟೇಷನದಲ್ಲಿ ಡಬ್ಬಿ ಹತ್ತುವಾಗ ಸುಭಾಸರು ತಮ್ಮ ಸೆಕ್ರೆಟರಿಯಾದ ಖೊಡವಾಡದ ಗುಡಿಯವರನ್ನು " ಈ ಅಪರಿಚಿಯದ ವ್ಯಕ್ತಿ ಯಾರು, ನಮ್ಮ ಜೊತೆಗೆ ಏಕೆ ಬರುತ್ತಿದ್ದಾರೆ " ಯೆಂದು ಕೇಳಿದರು. ಹಾಗೆ ಜೊತೆಗಿದ್ದವರು ವಾಸುದೇವ ಅಲ್ಲಪ್ಪ ನಾಯಕ, ಹಿಡಕಲ್ಲ, ಅಥಣಿ ತಾಲೂಕ ಕಾಂಗ್ರೇಸ ಕಮೀಟಿ ಸೆಕ್ರೆಟರಿ ಎಂದು ಪರಿಚಯಿಸಿ ಕೊಟ್ಟರೂ, ನೇತಾಜಿ ಒಂದು ಪರೀಕ್ಷೆ ಒಡ್ಡಿದರು. ನೇತಾಜಿ ತಮ್ಮಲ್ಲಿದ್ದ ಪೆನ್ನಿನ ಪಂಚಧಾತುವಿನ ನಿಬ್ಬಿನಿಂದ ವಾಸುದೇವರ ಕಿರು ಬೆರಳಿಗೆ ಚುಚ್ಚಿ ಅದೇ ರಕ್ತದಿಂದ ತಮ್ಮ ಡೈರಿಯಲ್ಲಿ ಸಹಿ ಹಾಕಿಸಿಕೊಂಡು, ನಂತರ ತೀವ್ರಗಾಮಿ ಪಕ್ಷದ ಸದಸ್ಯನೆಂದು ನೊಂದಾಯಿಸಿಕೊಂಡರು. ಸುಭಾಸರು ಭಾರತ ಮಾತ್ರವಲ್ಲ ಜಗತ್ತಿನಲ್ಲಿಯೇ ಅಸಾಧಾರಣ ವ್ಯಕ್ತಿ. ನೇತಾಜಿಯವರನ್ನು ನೋಡಿದ ವ್ಯಕ್ತಿ ' ಷಂಢನಾಗಿದ್ದರೂ ಪುರುಷತ್ವ ಪಡೆಯುತ್ತಾನೆ ' ಎಂದು ಜನ ನಂಬಿದ್ದರು. ಸುಭಾಷರು ಸ್ವಾಮಿ ವಿವೇಕಾನಂದರ ನುಡಿಗಳಿಂದ ಪ್ರಭಾವಿತರಾದವರು, ಹಿಂದು ಮುಸಲ್ಮಾನ ಭೇದವಿಲ್ಲದೆ ಜನ ಅವರ ದರ್ಶನ ಪಡೆದು ಅವರ ನುಡಿಯನ್ನು ಲಕ್ಷಪೂರ್ವಕ ಕೇಳುತ್ತಿದ್ದರು." [೮]

**೩.೮. ಹುದಲಿಯ ಅಖಿಲ ಭಾರತ ಗಾಂಧೀ ಸೇವಾ ಸಂಘದ ಸಮ್ಮೇಲನ :**

"ಹುದಲಿಯ ಇತಿಹಾಸದಲ್ಲಿ ಪ್ರಮುಖ ಘಟನೆಯಾಗಿ ಮೆರೆದದ್ದು ೧೯೩೭ ನೆಯ ಎಪ್ರಿಲ ೧೭ ರಂದು ನಡೆದ ಅಖಿಲ ಭಾರತ ಗಾಂಧೀ ಸೇವಾ ಸಂಘದ ಸಮ್ಮೇಲನ. ಈ ಸಮ್ಮೇಲನದ ಸಿದ್ದತೆಯು ಒಂದು ತಿಂಗಳ ಮೊದಲೇ ಆರಂಭವಾಗಿತ್ತು." [೯] "ಗಂಗಾಧರ ರಾವ ದೇಶಪಾಂಡೆ, ಶ್ರೀ ವಡವಿ, ಪುಂಡಲೀಕಜಿ ಕಾತಗಡೆ, ವಾಮನರಾವ ಬಿದರಿ, ಹಣಮಂತರಾವ ಕೌಜಲಗಿ, ಸಿದ್ದೂರಾವ ಪೂಜಾರ, ಯಾಳಗಿ, ಅಣ್ಣು ಗುರೂಜಿ ಮುಂತಾದ ನಾಯಕರು ಅತ್ಯಂತ ಹುರುಪಿನಿಂದ ದುಡಿದು ಎಲ್ಲ ಸಿದ್ದತೆ ಮಾಡಿದ್ದರು."[೧೦] "ಸಮ್ಮೇಲನಕ್ಕೆ ಬರುವ ಸದಸ್ಯರಿಗಾಗಿ ೧೦೦ ಕೋಣೆಗಳು, ಗಾಂಧಿಜೀಯವರಿಗಾಗಿ ಒಂದು ಕುಟೀರ, ಇವುಗಳ ನಡುವೆ ಸಭೆ ನಡೆಸಲು ಒಂದು ಮಂಟಪವನ್ನು ನಿರ್ಮಿಸಲಾಗಿತ್ತು." [೧೧] "ಹುದಲಿಯ ದಕ್ಷಿಣ ಅಗಸಿಯ ಎದುರಿಗೆ ಗುಡ್ಡದ ಕೆಳಗಿನ ಬಯಲಿನಲ್ಲಿ ವಿಶಾಲ ಮಂಟಪ ಹಾಕಲಾಗಿತ್ತು." [೧೨] ಹುದಲಿಯವರೆಲ್ಲರು ಶ್ರದ್ದೆಯಿಂದ ಸಮ್ಮೇಲನದ ಸಿದ್ದತೆ ಮಾಡುವಲ್ಲಿ ಸಹಕರಿಸಿದರು.

ಎಪ್ರಿಲ ೧೭ರಂದು ಗಾಂಧಿಜೀಯವರು ಮುಂಜಾನೆ ಮೇಲ ಗಾಡಿಯಿಂದ ಸುಲಧಾಳ ಸ್ಟೇಷನ್‌ದಲ್ಲಿಳಿದು ತಮಗಾಗಿ ಸಿಂಗರಿಸಿ ತಂದ ಚಕ್ಕಡಿಯಲ್ಲಿ ಹತ್ತದೆ ಕೋಲೂರಿ ನಡೆಯುತ್ತ (೧ ಮೈಲು) ಹುದಲಿಗೆ ಬಂದರು. ಅಗಸಿಯ ಬಾಗಿಲಿಗೆ ಹರಿಜನ

ಸುಮಂಗಲಿಯರು ಸ್ವಾಗತಿಸಿದರು. ದಾರಿಯಲ್ಲಿ ಮನೆಮನೆಯ ಎದುರು ಗಾಂಧೀಜಿಯವರನ್ನು ತುಂಬಿದ ಕೊಡಗಳ ನೀರು ಹಾಕಿ ಆರತಿ ಬೆಳಗಿ ಸ್ವಾಗತಿಸಿದ ಮೇಲೆ ಕುಟೀರ ಪ್ರವೇಶಕ್ಕೆ ಅನುವುಮಾಡಿಕೊಟ್ಟರು.

"ಗಾಂಧೀಜಿಯವರ ಜೊತೆಗೆ ಸರದಾರ ವಲ್ಲಭಭಾಯಿ ಪಟೇಲ, ಗಡಿನಾಡ ಗಾಂಧಿಯೆನಿಸಿದ ಖಾನ ಅಬ್ದುಲ್ ಗಫಾರಖಾನ್, ಸಿ. ರಾಜಗೋಪಾಲಾಚಾರ್ಯ, ಬಾಬು ರಾಜೇಂದ್ರ ಪ್ರಸಾದ, (ಮಾಜಿ ರಾಷ್ಟ್ರಪತಿ) ಆಚಾರ್ಯ ಕೃಪಲಾನಿ, ವಿನೋಬಾ ಭಾವೆ ಆಚಾರ್ಯ, ಕಾಕಾ ಸಾಹೇಬ್ ಕಾಲೇಲಕರ, ಕಿಶೋರಲಾಲ ಮಶ್ರುವಾಲಾ, ಮಹಾದೇವಭಾಯಿ ದೇಸಾಯಿ, ಗೋಪ ಬಂಧು, ಚೌಧರಿ ಸ್ವಾಮಿ ಆನಂದ ಅಪ್ಪಾಸಾಹೇಬ ಪಟವರ್ಧನ, ಜಮುನಾಲಾಲ್‌ಬಜಾಜ, ಮೀರಾಬೆನ್, ಕಸ್ತೂರಿಬಾಯಿ, ಮಣಿಬೆನ್ ಪಟೇಲ, ಪ್ರೇಮಾಬಾಯಿ ಕಂಟಕ ಮೊದಲಾದ ಅಖಿಲ ಭಾರತೀಯ ಕಾಂಗ್ರೇಸ್ಸ ಮುಖಂಡರು, ದೇಶದ ನೇತಾರರೆಲ್ಲರೂ, ಕಾರ್ಯಕರ್ತರೊಂದಿಗೆ ಸಮ್ಮೇಲನಕ್ಕೆ ಬಂದಿದ್ದರು". [೧೩]

"ಒಟ್ಟು ೭ ದಿನದ ಸಮ್ಮೇಲನ. ಸಮ್ಮೇಲನಕ್ಕೆ ೨೦ ಸಾವಿರಕ್ಕೂ ಮಿಕ್ಕಿ ಜನರು ಕೂಡಿದ್ದರು. ಸಮ್ಮೇಲನದಿಂದಾಗಿ ಹುದಲಿಯು ಗಾಂಧಿ ಗ್ರಾಮವೆಂದು ಹೆಸರು ಪಡೆಯಿತು".[೧೪] ಮಹಾತ್ಮ ಗಾಂಧಿಜೀ ಹಾಗೂ ದೇಶದ ಪ್ರಮುಖ ನಾಯಕರನ್ನು ನೋಡುವ, ಮತ್ತು ಅವರ ನುಡಿಗಳನ್ನು ಕೇಳುವ ಭಾಗ್ಯ ಸುತ್ತ ಮುತ್ತಲಿನ ಜನತೆಗೂ ಸ್ವಯಂ ಸ್ವೇವಕರಿಗೂ ಲಭ್ಯವಾಗಿತ್ತು. ಅವರಲ್ಲಿ ಹಿಡಕಲ್ಲದ ಭೀಮಪ್ಪ ಬಡಿಗೇರ ಮೇಸ್ತ್ರಿ, ರೇವಣ್ಣ ಬನಹಟ್ಟಿ, ವಾಸುದೇವ ನಾಯಿಕ, ರಾಮಪ್ಪ ಮುರಾರೆಪ್ಪ ಕಂಕಣವಾಡಿ, ಉದ್ದಪ್ಪ ಎತ್ತಿನಮನಿಯವರು ಸ್ವಯಂಸೇವಕರಾಗಿದ್ದರು."[೧೫]

ಸ್ವಯಂ ಸೇವಕರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಹುದಲಿಯ ಗಂಗಾಧರರಾವ ದೇಶಪಾಂಡೆ, ಪಾಶ್ಚಾಪುರದ ಅಣ್ಣು ಗುರೂಜಿ, ವಾಮನರಾವ ಬಿದರಿ, ಶ್ರೀರಂಗ ಕಾಮತ್, ವೆಂಕರೆಡ್ಡಿ ಹೂಲಿ, ಈರಯ್ಯ ಮಠದ, ಬಾಳಪ್ಪಾ ಹೊಳೆಯಾಚೆ, ಅಕ್ಕ ತಂಗೇರ ಹಳ್ಳದ ಕಾಯಾಕರ್ತರು, ಇನ್ನೂ ಅನೇಕರ ಜೊತೆ ನಿಕಟ ಸಂಪರ್ಕಕ್ಕೆ ಬರುವಂತಾಯಿತು. ಮುಂದೆ ಆ ನಾಯಕರು ಹಿಡಕಲ್ಲ ಗ್ರಾಮಕ್ಕೆ ಚಳುವಳಿಯ ನಿಮಿತ್ಯ ಬಂದಾಗ ಹೋರಾಟಗಾರರ ಮನೆಗಳಿಗೂ ಅಗಮಿಸುತ್ತಿದ್ದರು.

**೩.೯. ಕುಡಚಿಯಲ್ಲಿ ಸಮಾವೇಶಗೊಂಡ ದಕ್ಷಿಣ ಭಾರತದ ಸಂಸ್ಥಾನ ಪರಿಷತ್ತು :**

"೧೯೩೮ರಲ್ಲಿ ದಕ್ಷಿಣ ಭಾರತದಲ್ಲಿಯ ಸಂಸ್ಥಾನ ಪರಿಷತ್ತು ಕುಡಚಿಯಲ್ಲಿ ಸೇರಿತ್ತು. ಆ ಪರಿಷತ್ತಿಗೆ, ಕೆ.ಎಸ್. ನಾರಿಮನ್ ಅಧ್ಯಕ್ಷರು. ಎ. ಬಿ. ಲಠ್ಠೆಯವರು ಮುಖ್ಯ

ಅತಿಥಿಯಾಗಿ ಬಂದಿದ್ದರು. ಅಲ್ಲಿಯೂ ಸ್ವಯಂ ಸೇವಕರಾಗಿ ಹಿಡಕಲ್ಲ ಕಾರ್ಯಕರ್ತರು ಹೋಗಿದ್ದರು". [೧೬]

೧೯೩೮ರ ಸುಮಾರಿನ ಒಂದು ದಿನ ಮುಂಜಾನೆ ೧೦ ಗಂಟೆಯ ಸಮಯದಲ್ಲಿ, ರಾಮಪ್ಪ ಕಂಕಣವಾಡಿಯವರು ಗ್ರಾಮದ ಚಾವಡಿಯಲ್ಲಿ ಸಹ ಹೋರಾಟಗಾರ ಭೀಮಪ್ಪ ಚೆನ್ನಪ್ಪ ಬಡಿಗೇರ, ತರುಣ ಹೋರಾಟಗಾರರಾದ ಇಮಾಮಸಾಹೇಬ ಮುಲ್ಲಾ ಮತ್ತು ವಾಸುದೇವ ನಾಯಿಕರ ಜೊತೆ ಚಳುವಳಿಯ ಕುರಿತು ಚರ್ಚಿಸುತ್ತಿದ್ದರು. ಅದೇ ವೇಳಗೆ ಬ್ರಿಟಿಷ ಪೊಲೀಸ ಅಧಿಕಾರಿಯೊಬ್ಬ ನಾಲ್ಕು ಜನ ಪೊಲೀಸರ ಸಮೇತ, ಸ್ವಾತಂತ್ರ್ಯ ಚಳುವಳಿಕಾರರನ್ನು ಶೋಧಿಸುತ್ತ ಅಲ್ಲಿಗೆ ಆಗಮಿಸಿದರು. ಪೊಲೀಸರನ್ನು ನೋಡುತ್ತಲೇ ಭೀಮಪ್ಪ ಬಡಿಗೇರ ಮನಸ್ಸಿನಲ್ಲಿಯೇ ಕುದಿಯಲಾರಂಭಿಸಿದರು. ಬ್ರಿಟಿಷ ಸರ್ಕಾರದ ಸಾಕು ನಾಯಿಗಳೇಕೆ ಇಲ್ಲಿಗೆ ಬಂದರೆಂದು ಅಸಮಾಧಾನಗೊಂಡರು.

ಪೊಲೀಸ ಅಧಿಕಾರಿ ಚಾವಡಿಯಲ್ಲಿ ಕುಳಿತವರನ್ನು ಪ್ರಶ್ನಿಸಿದರು. ಈ ಊರಿನಲ್ಲಿರುವ ಸ್ವಾತಂತ್ರ್ಯ ಹೋರಾಟಗಾರರು ಯಾರು-ಯಾರು? ಅವರೆಲ್ಲ ಎಲ್ಲಿ ಅಡಗಿ ಕುಳಿತಿದ್ದಾರೆ? ನಮ್ಮ ಕೈಗೆ ಸಿಗಲಿ, ಅವರಿಗೊಂದು ಗತಿ ಕಾಣಿಸುತ್ತೇವೆಂದು ಗದರಿದರು. ಪೊಲೀಸರಿಂದ ಇನ್ನೂ ಮಾತು ಪೂರ್ಣಗೊಳ್ಳುವ ಮೊದಲೇ ಕುಳಿತುಕೊಂಡಿದ್ದ ಭೀಮಪ್ಪ ಬಡಿಗೇರ ಎದ್ದು ನಿಂತುಕೊಂಡು ಪೊಲೀಸರ ಜೊತೆ ವಾಗ್ವಾದಕ್ಕಿಳಿದರು. ಇಲ್ಲಿ ಕುಳಿತಿರುವ ನಾವೆಲ್ಲರೂ ಸ್ವಾತಂತ್ರ್ಯ ಹೋರಾಟಗಾರರೆ, ಅಡಗಿ ಕುಳಿತು ಕೊಳ್ಳಲು ನಾವೇನೂ ಹೇಡಿಗಳೇ, ನಾವು ಸ್ವಾತಂತ್ರ್ಯ ಹೋರಾಟಗಾರರು, ದೇಶದ ಸ್ವಾತಂತ್ರ್ಯಕ್ಕಾಗಿ ಜೀವನವನ್ನೇ ಮುಡುಪಾಗಿಡಲು ಸಿದ್ದರಾದವರು. ನಿಮ್ಮಂತ ಸಾಕು ನಾಯಿಗಳಿಗಾಗಲೀ, ನಿಮ್ಮ ಸರ್ಕಾರಕ್ಕಾಗಲೀ ಹೆದರುವವರಲ್ಲ, ಗಂಡೆದೆಯ ಗುಂಡಿಗೆಯನ್ನು ಹೊಂದಿದವರು. ನಿಮ್ಮ ಮುಂದೆಯೇ ನಿಂತುಕೊಂಡಿದ್ದೇನೆ, ನನಗೇನೂ ಗತಿ ಕಾಣಿಸುತ್ತಿರಿ ಕಾಣಿಸಿರಿ! ಎಂದು ಕ್ರೋದ ಭರಿತನಾಗಿ ಪೊಲೀಸರತ್ತ ಧಾವಿಸಿದ. ಕ್ಷಣ ಮಾತ್ರದಲ್ಲಿಯೇ ಪೊಲೀಸರು ಇವರನ್ನು ತಮ್ಮ ಬೆತ್ತಗಳಿಂದ ಚಾವಡಿಯ ಮುಂದೆಯೇ ಥಳಿಸಲಾರಂಭಿಸಿದರು. ಎಷ್ಟೇ ಹೊಡೆದರು ಭೀಮಪ್ಪ ಜಪ್ಪ ಎನ್ನಲಿಲ್ಲ. ದೇಶದ ಸ್ವಾತಂತ್ರ್ಯದ ಕನಸನ್ನು ಮೈಮನಗಳಲ್ಲಿ ತುಂಬಿಕೊಂಡ ಆತನಿಗೆ ಈ ಹೊಡೆತಗಳು ಭಾದಿಸಲಿಲ್ಲ. ಆದರೂ ಭೀಮಪ್ಪನಿಗೆ ಪೊಲೀಸರು ಬೆತ್ತದಿಂದ ಹೊಡೆಯುತ್ತಿದ್ದ ದೃಶ್ಯ ನೆರೆದ ಗ್ರಾಮಸ್ಥರನ್ನು ಬೆರಗುಗೊಳಿಸಿತು. ಎಂತಹ ದೇಶಾಭಿಮಾನಿ, ಎಂತಹ ಸ್ವಾತಂತ್ರ್ಯ ಪ್ರೇಮಿ ಎಂದು ತಮ್ಮ-ತಮ್ಮಲ್ಲಿಯೇ ಪಿಸುಗುಟ್ಟಿದರು. ನಿಜವಾದ ಹೋರಾಟಗಾರರು ಎಂತಹ ಕಷ್ಟ-ನಷ್ಟಗಳಿಗು ಹೆದರುವವರಲ್ಲ, ಎಂಬುದಕ್ಕೆ ಅಂದು ಗ್ರಾಮಸ್ಥರಿಗೆ ಉದಾಹರಣೆಯಾಗಿ ಕಂಡವನು ಭೀಮಪ್ಪ ಬಡಿಗೇರ.

ಭೀಮಪ್ಪನ್ನು ಪೊಲೀಸರು ಹೊಡೆಯುತ್ತಿರುವ ದೃಶ್ಯವನ್ನು ರಾಮಪ್ಪ ಕಂಕಣವಾಡಿಯವರಿಗೆ ನೋಡಲಾಗಲಿಲ್ಲ. ಪೊಲೀಸರಿಂದ ಭೀಮಪ್ಪನನ್ನು ತಮ್ಮತ್ತ

ಸೆಳೆದುಕೊಂಡರು. ನಾವೆಲ್ಲ ಸ್ವಾತಂತ್ರ್ಯ ಹೋರಾಟಗಾರರು, ಶಿಕ್ಷೆ ಕೊಡುವವರಿದ್ದರೆ, ನಮಗೆಲ್ಲರಿಗೂ ಕೊಡಿ! ಎಂದು ಸ್ವಲ್ಪ ಜೋರಾಗಿಯೇ ಪೊಲೀಸರನ್ನು ಗದರಿದರು. ಆಗ ಪೊಲೀಸರು ಹೊಡೆಯುವುದನ್ನು ನಿಲ್ಲಿಸಿದರು. ಸುತ್ತುವರೆದು ನಿಂತ ಗ್ರಾಮಸ್ಥರನ್ನು ಒಂದು ಸಲ ನೋಡಿದರು. ಇನ್ನೂ ಇವರಿಗೆ ಹೊಡೆದರೆ, ಗ್ರಾಮಸ್ಥರೇ ನಮ್ಮ ಮೇಲೆ ಬೀಳಬಹುದೆಂದು ಅಳುಕಿದರು. ಹೆಚ್ಚು ಹೊತ್ತು ಅಲ್ಲಿ ನಿಲ್ಲದೇ ನಾಲ್ವರನ್ನು ಬಂಧಿಸಿ ಠಾಣೆಗೆ ಕರೆದೊಯ್ಯದರು. ಮುಂದೆ ಇವರನ್ನು ಬೆಳಗಾವಿ ಜೇಲಿಗೆ ವರ್ಗಾಯಿಸಲಾಯಿತು. ೬ ತಿಂಗಳ ವರೆಗೆ ಜೇಲಿನಲ್ಲಿದ್ದ ಇವರು, ನಂತರ ಬಿಡುಗಡೆಗೊಂಡು ಗ್ರಾಮಕ್ಕೆ ಬಂದರು.

ಇದೆಲ್ಲವನ್ನು ಕಣ್ಣಾರೆ ಕಂಡ, ಸ್ವಾತಂತ್ರ್ಯ ಹೋರಾಟಗಾರ ಭೀಮರಾವ ಕದಮರ ಸಹೋದರ ಮತ್ತು ಅಂದಿನ ಪ್ರಸಿದ್ಧ ಲಾವಣಿಕಾರ ರಾಣಬಾ ಕದಮ ಅವರು ಈ ವಿಷಯವನ್ನು ತನ್ನ ಕರಬಲ್ಲ ಹಾಡಿನಲ್ಲಿ ಹೀಗೆ ಸೆರೆಹಿಡಿದಿಟ್ಟದಾರೆ.

**ಮಹಾತ್ಮಾ ಗಾಂಧೀ ಕಲ್ಪನಾ। ಮಹಾತ್ಮಾ ಕಲ್ಪನಾ।**
**ಸ್ವರಾಜ್ಯ ತಗೊಳ್ಳೊ ಸಂದಾನಾ।।**

**ಪೂಜಿ ಮಾಡಿದಾರೋ ಭೂದೇವಿನಾ।**
**ಸರಸ್ವತಿ ಸ್ವಾರ್ಥಿಕ ಆಗೋದಿನಾ।।**

**ಕೂಗಿ ಹೇಳತಾಳ ಭೂದೇವಿನಾ।**
**ಸ್ವರಾಜ್ಯ ಆಗೋದು ನಿಮ್ಮ ಸ್ವಾದೀನ।।**

**ತತ್ವ ತಿಳದಿದಾನೋ ಶೆಟ್ಟತನಾ।**
**ಆವಾಗ ಕೂಡಿರೋ ಕಾಂಗ್ರೇಸನಾ।।**

**ಖಾದಿ ಟೊಪ್ಪಿಗೆ ನಾಲ್ಕು ಸಾವಿರ ಜನ।**
**ಜಯ ಅಂತಾ ಕಡದಾರೋ ಸಿಂಧಿ ಬಣ।।**

**ದಿಲ್ಲಿಕ ತಿಳಸ್ಯಾರೋ ಸೂಚನಾ।**
**ಸ್ಟೇಷನ್ ಸುಟ್ಟಾರೋ ಪಾಶ್ಚಾಮೂರನಾ।।**

**ಹೂಕಮ ಆದಿತೋ ದೊಡ್ಡ ಸಾಹೇಬನಾ।**
**ಹಿಡಿಕೊಂಡ ಬರಬೇಕಾ ಕಾಂಗ್ರೇಸನಾ।।**

ಹಿಡಿದಾರೋ ಹುದಲಿಯ ಗಂಗಾಧರನಾ!
ಹಿಡಿದಾರೋ ಬಿಡಲಿಲ್ಲ ದಾನಪ್ಪ ಶೆಟ್ಟಿನಾ!!

ಹಿಡಿದಾರೋ ಹಿಡಕಲ್ಲ ಇಮಾಮನಾ!
ಬಡಿಗೇರ ಭೀಮನಾ ಕಂಕಣವಾಡಿ ರಾಮನಾ!!

ಅವರಿಂದ ಹಿಡಕಲ್ಲ ಉದ್ಧಾರನಾ!
ಸ್ವರಾಜ್ಯ ತಗೊಂಡಾರೋ ಹಾಕಿ ಪನಾ!!

ಮಹಾತ್ಮಾ ಗಾಂಧೀ ಕಲ್ಪನಾ!
ಸ್ವರಾಜ್ಯ ತಗೊಳ್ಳೊ ಸಂದಾನಾ!!

ಇಂತಹ ಗೀಗಿಪದ ಮತ್ತು ಕಬರಲ್ ಹಾಡುಗಳಿಂದ ಹೋರಾಟಗಾರರಲ್ಲಿ ನೂತನ ಚೇತನವು ಸಂಚಾರವಾಯಿತು. ದೇಶಕ್ಕಾಗಿ ಸಾಧ್ಯವಿದ್ದ ಸೇವೆಯನ್ನು ಸಮರ್ಪಿಸಬೇಕೆಂಬ ಭಾವನೆ ಕೇಳುಗರಲ್ಲಿ ಸಾಮೂಹಿಕವಾಗಿ ಬೆಳೆಯಿತು. ದೇಶ ಭಕ್ತಿಯ ಮತ್ತು ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣಾತ್ಮಕವಾದ ಅನೇಕ ಹಾಡುಗಳು ಅಂದು ಕೇಳಿ ಬರುತ್ತಿದ್ದವು. ಗೀಗೀ ಪದಗಳು, ಲಾವಣಿಗಳು, ಕರಬಲ್ ಹಾಡುಗಳು ಅಂದು ಜನಸಾಮಾನ್ಯರಲ್ಲಿ ರಾಜಕೀಯ ಜಾಗೃತಿಗೆ ಒಳ್ಳೆಯ ಮೆರಗನ್ನು ಕೊಟ್ಟು ಅವರನ್ನು ಕೂಡ ಸ್ವಾತಂತ್ರ್ಯ ಸಂಗ್ರಾಮಕ್ಕೆ ಹುರುದುಂಬಿಸುವುದನ್ನು ಕಾಣುತ್ತೇವೆ.

**೩.೧೦. ೧೯೪೧ರ ವೈಯಕ್ತಿಕ ಸತ್ಯಾಗ್ರಹ :**

"೧೯೪೧ರ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಲು ಹಿಡಕಲ್ಲದ ರಾಮಪ್ಪಾ ಕಂಕಣವಾಡಿ, ಭೀಮಪ್ಪ ಬಡಿಗೇರ, ಇಮಾಮಸಾಹೇಬ ಮುಲ್ಲಾ, ವಾಸುದೇವ ನಾಯಿಕ ಇವರಿಗೆ ಒಪ್ಪಿಗೆ ದೊರೆತಿತು".[೧೭] "ಮಧ್ವರಾಜ ದೇಶಪಾಂಡೆ ಮತ್ತು ಇಮಾಮಸಾಹೇಬ ಮುಲ್ಲಾ ಇವರು ಈ ಚಳುವಳಿಯಲ್ಲಿ ಭಾಗವಹಿಸಿದಕ್ಕಾಗಿ, ಬಂಧಿತರಾಗಿ ೬ ತಿಂಗಳುಗಳವರೆಗೆ ಜೇಲು ಶಿಕ್ಷೆಯನ್ನು ಅನುಭವಿಸಿದರು".[೧೮]

ಮಾರ್ತಾಂಡಪ್ಪ ಹಿಟ್ಟಣಗಿ ಮುಗಳಖೋಡ, ಇವರು ಕಾಂಗ್ರೇಸ ಕಮೀಟಿಯಲ್ಲಿ ಸದಸ್ಯರಾಗಿ ಹೆಸರು ನೊಂದಾವಣಿ ಮಾಡಿಸಿಕೊಂಡು, ನೂಲು ತೆಗೆಯುತ್ತಿದ್ದರು.

ತಿಂಗಳಿಗೊಮ್ಮೆ ಖಾದಿ ಪ್ರಚಾರಕ್ಕಾಗಿ ಚೆನ್ನಪ್ಪಾ ವಾಲಿ, ಶಾಂತಿನಾಥ ಇಂಗಳೆ, ಪದ್ಮರಾಜ ಬೋಗಾರ, ಅಣ್ಣು ಗುರೂಜಿ, ವಾಮನರಾವ ಬಿದರಿ, ಅಥಣಿಯಿಂದ

ಗುರುಮಾಸ್ತರ ಜೇರೆ ಇವರೆಲ್ಲರೂ ಬಂದು ಪ್ರತಿ ಹಳ್ಳಿಗೆ ಭೆಟ್ಟಿ ಕೊಟ್ಟು ಚಾಚು ತಪ್ಪದಂತೆ ಕಾರ್ಯನಿರ್ವಹಿಸುತ್ತಿದ್ದರು. ಇವರು ಕಾಂಗ್ರೇಸ ಕಮೀಟಿ ಲೆಕ್ಕ ಪತ್ರಗಳನ್ನು ಸರಿ ಮಾಡುತ್ತಿದ್ದರು. ಹೀಗಾಗಿ ಈ ಎಲ್ಲ ನಾಯಕರ ಸಂಪರ್ಕ ಹಿಡಕಲ್ಲ ಗ್ರಾಮದ ಜೊತೆ ಇದ್ದು, ಸ್ವಾತಂತ್ರ್ಯ ಸಂಗ್ರಾಮದ ಬೆಂಕಿ ಹೊತ್ತಿಕೊಳ್ಳುಲು ಸಾಧ್ಯವಾಯಿತು.

ರಾಮಪ್ಪ ಕಂಕಣವಾಡಿ, ವಾಸುದೇವ ನಾಯಿಕ, ಭೀಮಪ್ಪ ಚೆನ್ನಪ್ಪ ಬಡಿಗೇರ, ಇಮಾಮಸಾಹೇಬ ಮುಲ್ಲಾರವರು, ನೆರೆಯ ಗ್ರಾಮವಾದ ಶಂಕರಹಟ್ಟಿ ರಾಜಾಸಾಬ ಸುಲ್ತಾನಸಾ ನದಾಫ, ರಾಜಾಸಾಬ ಮಸ್ತಾನಸಾ ನದಾಫ, ಮಹಾದೇವಪ್ಪ ಪಾಂಡಪ್ಪ ಪೋದ್ದಾರ ಜೊತೆಗೂಡಿ ಅನೇಕ ಚಳುವಳಿಯ ಚಟುವಟಿಕೆಗಳಲ್ಲಿ ಸಹ ಕಾರ್ಯಕರ್ತರಾಗಿ ಕೆಲಸವನ್ನು ನಿರ್ವಹಿಸಿದ್ದರು.

**೩.೧೧. ಮಹಾಲಿಂಗಪೂರದ ಪೋಸ್ಟ್ ಆಫೀಸನ್ನು ಸುಡುವ ಯೋಜನೆ :**

ಚಳುವಳಿಯ ಆರಂಭದ ದಿನಗಳಲ್ಲಿ ಗ್ರಾಮದಲ್ಲಿದ್ದ ತರುಣರ ಹೋರಾಟಗಾರರ ತಂಡವು ಮಹಾಲಿಂಗಪೂರಕ್ಕೆ ತೆರಳಿ ಅಲ್ಲಿರುವ ಪೋಸ್ಟ್ ಆಫೀಸನ್ನು ಸುಡುವ ಯೋಜನೆಯನ್ನು ಹಾಕಿಕೊಂಡಿತು. ಹೋರಾಟಗಾರರಿಂದ ಕೂಡಿದ ೧೫-೨೦ ಜನರ ತಂಡವು ಮಹಾಲಿಂಗಪೂರದತ್ತ ಪ್ರಯಾಣ ಬೆಳೆಸಿತು. ಎಲ್ಲರೂ ಗುಂಪುಗೂಡಿ ಪ್ರಯಾಣಿಸುವುದು ಅನುಮಾಕ್ಕಿಡಾಗಬಹುದೆಂದು ಮೂರು-ನಾಲ್ಕು ಜನರಿಂದ ಕೂಡಿದ ತಂಡದೊಂದಿಗೆ ಸ್ವಲ್ಪ ದೂರದ ಅಂತರದಲ್ಲಿ ೪-೫ ತಂಡಗಳಲ್ಲಿ ಹಿಂದೆ-ಮುಂದೆ ಪ್ರಯಾಣ ಸಾಗಿತು. ಗ್ರಾಮದಿಂದ ಹೊರಟ ಈ ತಂಡ ಒಂದು ಗಂಟೆಯಲ್ಲಿಯೇ ಮುಗಳಖೋಡ, ಪಾಲಬಾಂವಿ ಗ್ರಾಮಗಳನ್ನು ದಾಟಿ, ಸುಲ್ತಾನಪೂರ ತಲುಪಿತು. ಮಧ್ಯಾಹ್ನದ ಉರಿ ಬಿಸಿಲಿನ ತಾಪದಿಂದ ವಿಶ್ರಾಂತಿ ಪಡೆಯಲು ಊರ ಹೊರಗಿನ ವಿಶಾಲವಾದ ಗಿಡದ ಕೆಳಗೆ ತಂಡ ಬೀಡುಬಿಟ್ಟಿತು.

ಅಂದು ಸುಲ್ತಾನಪೂರದ ಗೌಡರು ಯಾವುದೋ ಕೆಲಸದ ನಿಮಿತ್ಯ ಊರಿನಿಂದ ಬೇರೆಡೆಗೆ ಪ್ರಯಾಣ ಬೆಳೆಸಬೇಕಿತ್ತು. ಆ ಕಾರಣಕ್ಕಾಗಿ ಗ್ರಾಮವನ್ನು ಬಿಟ್ಟು ಊರ ಹೊರಗೆ ಬಂದಾಗ ೧೫-೨೦ ಜನರಿಂದ ಕೂಡಿದ ತಂಡವೊಂದು ಗಿಡದ ಕೆಳಗೆ ಕುಳಿತುಕೊಂಡಿರುವುದು ಕಂಡಿತು. ಗಿಡದ ಕೆಳಗೆ ಕುಳಿತವರು, ಯಾರಿರಬಹುದು? ನಮ್ಮ ಗ್ರಾಮಸ್ಥರೇ? ಅವರಂತೂ ಅಲ್ಲವೇ ಅಲ್ಲ. ಮುಂಜಾನೆಯಿಂದ ಎಲ್ಲಾ ಗ್ರಾಮಸ್ಥರು ತಮ್ಮ ತಮ್ಮ ಕಾರ್ಯಗಳಲ್ಲಿ ಮಗ್ನರಾಗಿದ್ದನ್ನು, ಸ್ವತಃ ನಾನೇ ನೋಡಿದ್ದೇನೆ. ಅವರಂತೂ ಅಲ್ಲ. ಇವರ್‍ಯಾರೋ ಬೇರೆ ಊರಿನಿಂದ ಸಾಗುತ್ತಿರುವ ಪ್ರಯಾಣಿಕರಾಗಿರಬಹುದು. ಒಂದು ಕ್ಷಣ ವಿಚಾರಿಸಿ ಮುಂದೆ ಸಾಗಬೇಕೆಂದು ನಿರ್ಧರಿಸಿ ಆ ಗಿಡದ ಕಡೆಗೆ ತಮ್ಮ ಸೇವಕನೊಂದಿಗೆ ನಡೆದರು.

ಇಬ್ಬರು ವ್ಯಕ್ತಿಗಳು ತಾವು ಕುಳಿತ ಕಡೆಗೆ ಬರುತ್ತಿರುವುದನ್ನು ಗುಂಪು ದೂರದಿಂದಲೇ ಗಮನಿಸಿತು. ಅವರ ಮನಸ್ಸಿನಲ್ಲಿ ಸಂದೇಹಗಳ ಸುರಿಮಳೆ. ಸಮೀಪಕ್ಕೆ ಬರಲಿ ಯಾರೆಂದು ತಿಳಿಯುತ್ತದೆ, ಸುಮ್ಮನೆ ಇಲ್ಲ-ಸಲ್ಲದ ವಿಚಾರಗಳನ್ನು ತಲೆಯಲ್ಲಿ ನಾವೇ ತುಂಬಿಕೊಳ್ಳುವುದು ಬೇಡವೆಂದು, ಅವರು ಬರುತ್ತಿರುವುದನ್ನೇ ನಿರಿಕ್ಷಿಸುತ್ತ ಕುಳಿತುಬಿಟ್ಟರು. ಒಂದೆರಡು ನಿಮಿಷದಲ್ಲಿಯೇ ರಸ್ತೆಯಿಂದ ಅಣತಿ ದೂರದಲ್ಲಿದ್ದ ಗಿಡದ ಸಮೀಪಕ್ಕೆ ಸುಲ್ತಾನಪುರದ ಗೌಡರು ಮತ್ತು ಅವರ ಸೇವಕ ಬಂದರು. ಏರು ಧ್ವನಿಯಲ್ಲಿಯೇ ಗೌಡರು ತಂಡವನ್ನು ಪ್ರಶ್ನಿಸಲಾರಂಭಿಸಿದರು. ನೀವು ಯಾವ ಊರಿನವರು? ಎಲ್ಲಿಂದ ಬರುತ್ತಿರುವಿರಿ? ಮುಂದೆ ಎಲ್ಲಿಗೆ ಹೋಗುತ್ತಿರುವಿರಿ? ಮುಂತಾಗಿ ಪ್ರಶ್ನಿಸಲಾರಂಭಿಸಿದರು.

ಆಗ ತಂಡದವರು, ತಾವು ನೆರೆಯ ಹಿಡಕಲ್ಲ ಗ್ರಾಮದವರಾಗಿದ್ದು ಸಂಬಂಧಿಕರ ಊರಾದ ಮಹಾಲಿಂಗಪೂರಕ್ಕೆ ಹೋಗುತ್ತಿರುವುದಾಗಿ ಹೇಳಿದರು. ಮಹಾಲಿಂಗಪೂರದಲ್ಲಿ ನಿಮ್ಮ ಸಂಬಂಧಿಕರು ಯಾರು? ನನಗೆ ಮಹಾಲಿಂಗಪೂರದಲ್ಲಿರುವ ಕೆಲವು ಜನರ ಬಗ್ಗೆ ಗೊತ್ತು, ಅವರ ಹೇಸರೇನು, ಎಂದು ಮರು ಪ್ರಶ್ನಿಸಿದರು. ಏಕಾ-ಏಕಿ ಬರುತ್ತಿರುವ ಪ್ರಶ್ನೆಗಳಿಂದ ತಂಡದವರು ಗೊಂದಲಕ್ಕಿಡಾದರು. ಆಗ ಇನ್ನೂ ವಿಷಯವನ್ನು ಮುಚ್ಚಿಟ್ಟರೆ ಸರಿಯಲ್ಲ. ಇವರೇನು ನಮ್ಮ ವೈರಿಗಳಲ್ಲ, ಬಹುಶಃ ನಾವು ಮಾಡ ಹೊರಟಿರುವ ಕಾರ್ಯವನ್ನು ಇವರಿಗೂ ಹೇಳಿದರೆ, ಇವರಿಂದ ನಮಗೆ ಸಹಾಯ ದೊರೆಯಬಹುದೆಂಬ ನಿರೀಕ್ಷೆಯಲ್ಲಿ ಗುಂಪಿನ ಸದಸ್ಯರೊಬ್ಬರು, ಗೌಡರಿಗೆ ಮನದಲ್ಲಿ ಅಳುಕುತ್ತಲೇ ವಿವರಿಸಿದರು. ನಾವು ಚಳುವಳಿಕಾರರು, ನಾವೆಲ್ಲ ಮಹಾಲಿಂಗಪೂರಕ್ಕೆ ಹೊರಟಿರುವೆವು. ಸಂಜೆ ಕಳೆದು ರಾತ್ರಿಯಾದ ಮೇಲೆ ಊರನ್ನು ಪ್ರವೇಶಿಸಿ ಅಲ್ಲಿರುವ ಪೋಸ್ಟ್ ಆಫೀಸನ್ನು ಸುಟ್ಟು ಹಾಕುವ ಯೋಜನೆ ಹೊಂದಿದ್ದೆವೆಂದರು. ಇದನ್ನು ಕೇಳಿದ ಗೌಡರಿಗೆ ಒಂದು ಕ್ಷಣ ಹೆಮ್ಮೆ, ಇನ್ನೊಂದು ಕಡೆ ಏನೂ ಅರಿಯದ ಅಮಾಯಕರಿಂದ ಕೂಡಿದ ಈ ತಂಡಕ್ಕೆ ಚಳುವಳಿ ಮಾಡುವ ಬಗೆಯೂ ಗೊತ್ತಿಲ್ಲದ ಬಗ್ಗೆ ಕನಿಕರ ಉಂಟಾಯಿತು. ಇದನ್ನು ಚಳುವಳಿಕಾರರಿಗೆ ತೋರುಗೊಡದೆ ಮಾತಿಗಿಳಿದರು.

'ನೋಡ್ರೇಪ್ಪಾ' ನೀವೆಲ್ಲಾ ನಮ್ಮವರೆಂದೂ ಹೇಳುತ್ತೇನೆ, ನಾನು ಈ ಊರಿನ ಗೌಡ, ಸರ್ಕಾರದ ವಿರುದ್ಧವಾಗಿ ಏನೇ ಕಾರ್ಯಗಳು ನನಗೆ ಕಂಡು ಬಂದರೆ, ನಾನು ಪೊಲೀಸರಿಗೆ ತಿಳಿಸಬೇಕು, ಅದು ನನ್ನ ಕೆಲಸ. ಆದರೆ, ನಾನು ಅಂತವನಲ್ಲ, ನನಗೂ ದೇಶ ಸ್ವಾತಂತ್ರ್ಯ ಹೊಂದಬೇಕೆಂಬ ಆಸೆ ಇದೆ. ಅದರೆ ಬ್ರಿಟಿಷರನ್ನು ಎದುರಿಸಿ ಅವರನ್ನು ದೇಶದಿಂದ ಹೊರ ಹಾಕುವುದು ಅಷ್ಟು ಸುಲಭವಲ್ಲ. ನಿಮ್ಮನ್ನು ನೋಡಿದರೆ, ಈಗತಾನೇ ಚಳುವಳಿಯಲ್ಲಿ ಧುಮುಕಿದಂತೆ ನನಗೆ ಅನಿಸುತ್ತದೆ. ನಿಮಗೆ ಗೌಪ್ಯವಾಗಿ ಚಳುವಳಿಯನ್ನು ಹೇಗೆ ಮಾಡಬೇಕೆಂಬುದರ ಬಗ್ಗೆ ತಿಳುವಳಿಕೆಯೂ ಇಲ್ಲ, ನೀವು ಹೀಗೆ ಬಹಿರಂಗವಾಗಿ ಮಹಾಲಿಂಗಪೂರಕ್ಕೆ ಪೋಸ್ಟ್ ಆಫೀಸ್ ಸುಡಲು ಹೋಗುತ್ತಿರುವುದಾಗಿ, ರಸ್ತೆ ಗುಂಟ ಹೇಳುತ್ತ ಹೊರಟರೆ, ಮಾರ್ಗದಲ್ಲಿಯೇ ನಿಮ್ಮನ್ನು ಬಂಧಿಸಬಹುದು. ಒಂದು ವೇಳೆ

ಪೊಲೀಸರು ನಿಮ್ಮನ್ನು ಬಂಧಿಸಿ ಪೊಲೀಸ್ ಸ್ಟೇಷನದಲ್ಲಿ ಹಾಕಿದರೆ ಮುಗಿಯಿತು. ಇಲ್ಲ-ಸಲ್ಲದ ಎಲ್ಲಾ ಆರೋಪಗಳನ್ನು ನಿಮ್ಮ ಮೇಲೆ ಜಡಿದು, ೮-೧೦ ವರ್ಷಗಳ ವರೆಗೆ ಜೈಲಿನಿಂದ ಹೊರಗೆ ಬರದಂತೆ ಮಾಡಿ ಅಲ್ಲಯೇ ಕೊಳೆಯುವಂತೆ ಮಾಡುವರು.

ಜೈಲಿನಲ್ಲಿ ನೀವು ಅನುಭವಿಸ ಬೇಕಾದ ಯಾತನೆ, ಕಷ್ಟ-ನಷ್ಟಗಳ ಅರಿವಿದೆಯೇ ನಿಮಗೆ? ಕ್ರಾಂತಿಯ ಹುಮ್ಮಸಿನಲ್ಲಿ ಸಿಕ್ಕು ಪೊಲೀಸ ಸ್ಟೇಷನದಲ್ಲಿ ಬಿದ್ದು, ಅವರ ಒದೆ ತಿಂದ ಮೇಲೆ ಸ್ವಾತಂತ್ರ್ಯ ಚಳುವಳಿಯೆಂದರೇನು? ಎನ್ನುವುದು ತಿಳಿಯುವುದು, ನೀವು ಸದ್ಯ ತಿಳಿದುಕೊಂಡಂತೆ, ಅದೊಂದು ಹುಡುಗಾಟದ ಕೆಲಸವಲ್ಲ, ನಿಮ್ಮನ್ನೆಲ್ಲ ನೋಡಿದರೆ, ನಿವ್ಯಾರೂ ಶ್ರೀಮಂತರ ಮಕ್ಕಳ ಹಾಗೇ ಕಾಣಿಸುತ್ತಿಲ್ಲ. ಎಲ್ಲರೂ ಬಡವರ ಮಕ್ಕಳಂತೆ ನನಗೆ ತೋರುತ್ತಿದೆ. ಬಡತನದಲ್ಲಿರುವ ನಿಮ್ಮ ತಂದೆ-ತಾಯಿಗಳಿಗೆ, ನಿಮ್ಮ ಬಂಧನದ ವಿಷಯ ಇನ್ನೂಷ್ಟು ತ್ರಾಸ ಕೊಡುವಂತಾಗಬಾರದು. ಬಹುಶಃ ನೀವು ಮಾಡುತ್ತಿರುವ ಕಾರ್ಯವು ಕೂಡ ಅವರಿಗೆ ಗೊತ್ತಿರಲಿಕ್ಕಿಲ್ಲ. ಈ ಚಳುವಳಿಯ ವಿಚಾರ ಬಿಟ್ಟು ನಿಮ್ಮ ಊರಿನ ಕಡೆಗೆ ನಡೆಯಿರಿ, ಎಂಬ ಬುದ್ಧಿ ಮಾತುಗಳನ್ನು ಗೌಡರು ಹೇಳಿದರು. ಒಂದು ವೇಳೆ ನನ್ನ ಮಾತನ್ನು ಕೇಳದೇ ಮಹಾಲಿಂಗಪೂರಕ್ಕೆ ಹೊರಟರೆ ನಾನೇ ಪೊಲೀಸ್‌ರಿಗೆ ಹೇಳುತ್ತೇನೆಂಬ ಹುಸಿ ಬೆದರಿಕೆಯನ್ನು ಗೌಡರು ಹಾಕಿದಾಗ, ತರುಣರ ತಂಡದಲ್ಲಿದ್ದ ಎಲ್ಲರಿಗೂ ಸಣ್ಣ ನಡುಕು. ಇದೇನಪ್ಪಾ ಪೋಸ್ಟ್ ಆಫೀಸ್ ಸುಡುವ ಮೊದಲೇ ಭಯದ ನೆರಳು. ಗೌಡರ ಮಾತನ್ನು ಧಿಕ್ಕರಿಸಿ ಮಹಾಲಿಂಗಪೂರಕ್ಕೆ ಹೊಗುವುದು ಒಳ್ಳೆಯದಲ್ಲ. ನಮ್ಮ ವಿಚಾರವಂತೂ ರಟ್ಟಾಗಿದೆ, ಇನ್ನೂ ಮುಂದುವರೆದು ಮಹಾಲಿಂಗಪೂರಕ್ಕೆ ಹೋದರೆ ಸರಿಯಾಗದೂ, ಎಂದು ತಮ್ಮ-ತಮ್ಮಲ್ಲಿ ಚರ್ಚಿಸಲಾರಂಭಿಸಿದರು.

ಗೌಡರ ಮಾತನ್ನು ಲೆಕ್ಕಿಸದೇ ಮುಂದುವರೆಯುವಷ್ಟು ಧೈರ್ಯ ತರುಣ ಹೋರಾಟಗಾರರ ತಂಡಕ್ಕೆ ಆಗಲಿಲ್ಲ. ಈ ತೊಳಲಾಟದಲ್ಲಿದ್ದಾಗಲೇ ಗೌಡರು, ತಮ್ಮದೇ ಏರು ಧ್ವನಿಯಲ್ಲಿ ಗದರಿಸಲಾರಂಭಿಸಿದರು. 'ಎಲ್ಲರೂ ಶ್ಯಾಣ್ಯಾರೀದ್ದರಿ ನಡೆಯಿರಿ ನಿಮ್ಮ ಊರಿಗೆ. ಅಲ್ಲಿ ನಿಮ್ಮ ಅವ್ವ-ಅಪ್ಪ, ಎಲ್ಲಿ ಹೋದರೆಂದು ನಿಮ್ಮನ್ನು ಹುಡುಕುತ್ತಿರಬೇಕು, ನಡೆ-ನಡೆಯಿರಿ', ಎಂದು ಅವರನ್ನು ಎಬ್ಬಿಸಲಾರಂಭಿಸಿದರು. ಕುಳಿತುಕೊಂಡ ಎಲ್ಲರೂ ಮುಖ-ಮುಖ ನೋಡಿಕೊಳ್ಳುತ್ತ ಕೈಚೀಲದೊಂದಿಗೆ ಎದ್ದು ನಿಂತುಕೊಂಡರು. ಗೌಡರು ಅವರ ಕೈಯಲ್ಲಿದ್ದ ಕೈಚೀಲಗಳನ್ನು ಸೂಕ್ಷ್ಮವಾಗಿ ಗಮನಿಸಿದರು. ಒಂದೆರಡು ಕೈಚೀಲಗಳು ಸ್ವಲ್ಪ ಜಾಸ್ತಿಯೇ ತುಂಬಿಕೊಂಡಿದ್ದವು. ಅವುಗಳಲ್ಲಿ ಚಿಕ್ಕ-ಚಿಕ್ಕ ಡಬ್ಬಿಗಳಲ್ಲಿ ಸೀಮೆ ಎಣ್ಣೆ ತುಂಬಿದ್ದಕ್ಕೆ ಸಾಕ್ಷಿಯೆಂಬಂತೆ ಸೀಮೆ ಎಣ್ಣೆಯ ವಾಸನೆ ಅಲ್ಲೆಲ್ಲಾ ಹರಡಿತ್ತು. ಗೌಡರ ದರ್ಪದ ಮಾತುಗಳಿಗೆ ಅಂಜಿದ ಚಳುವಳಿಕಾರರ ತಂಡ ತಮ್ಮ ಯೋಜನೆಯನ್ನು ಕೈಬಿಟ್ಟು ಊರಿನೆಡೆಗೆ ಹಿಂತಿರುಗಲು ತೀರ್ಮಾನಿಸಿತು. ಸ್ವಲ್ಪ ದಿನಗಳ ತರುವಾಯ ಮತ್ತೊಮ್ಮೆ ಈ ಯೋಜನೆಯನ್ನು ಸಫಲಗೊಳಿಸಬಹುದೆಂಬ ವಿಚಾರದೊಂದಿಗೆ ಊರಿನತ್ತ ಮುಖ ಮಾಡಿದರು.

ಗೌಡರು ತಮ್ಮ ಸೇವಕನೊಂದಿಗೆ ಚಳುವಳಿಕಾರರ ಜೊತೆಗೂಡಿ ಗ್ರಾಮದ ಸರಹದ್ದು ತಲುಪವವರೆಗೆ ಪ್ರಯಾಣಿಸಿದರು. ತಂಡದವರು ಪಾಲಬಾಂವಿ ಸರಹದ್ದಿನಲ್ಲಿ ಪ್ರಯಾಣಿಸುವುದು ಕಣ್ಣಿಗೆ ಕಾಣುವವರೆಗೆ ನೋಡುತ್ತಲೇ ನಿಂತಿದ್ದರು. ಯೋಜಿಸಿದ ಕಾಯಕವನ್ನು ಅರ್ಧಕ್ಕೆ ಬಿಟ್ಟು ಹಿಂತಿರುಗಿ ಊರಿನ ಕಡೆಗೆ ಹೊರಟು, ದೂರ-ಬಹುದೂರದಲ್ಲಿ ಸಾಗುತ್ತಿದ್ದ ತರುಣರ ಪಡೆಯನ್ನು ನೋಡುತ್ತಿದ್ದ ಗೌಡರಿಗೆ ಮನಸ್ಸಿನಲ್ಲಿ ಕಸಿವಿಸಿ, ಚಳುವಳಿಕಾರರನ್ನು ಹಿಂದಕ್ಕಟ್ಟಿದೆನೇಲ್ಲ ಎನ್ನುವ ಕೊರಗು ಒಂದು ಕಡೆಯಾದರೆ, ಅಮಾಯಕ ತಂಡವೊಂದನ್ನು ರಕ್ಷಿಸಿ ಹಿಂತಿರುಗಿಸಿ ಕಳುಹಿಸಿದ ನೆಮ್ಮದಿ.

ಯುವಕರ ಗುಂಪು ಸಾಯಂಕಾಲ ಕಳೆದು ಮಬ್ಬುಗತ್ತಲಾಗುವ ವೇಳೆಗೆ ಗ್ರಾಮವನ್ನು ಬಂದು ತಲುಪಿದರು. ಮಹಾಲಿಂಗಪೂರದ ಪೋಸ್ಟ ಆಫೀಸ ಸುಡುವ ಕಾರ್ಯ ಕೈಗೂಡಲಿಲ್ಲ ಎನ್ನುವ ಕೊರಗು ತಂಡವನ್ನು ಸುಮಾರು ದಿನಗಳವರೆಗೆ ಕಾಡಿತು. ಆದರೆ ಅದು ಈ ತಂಡಕ್ಕೆ ಅನೇಕ ಅನುಭವಗಳನ್ನು ನೀಡಿತು. ಚಳುವಳಿಯ ಸ್ವರೂಪ, ಗೌಪ್ಯತೆ, ಕಾರ್ಯತಂತ್ರ ಮುಂತಾದವುಗಳ ಬಗ್ಗೆ ಪಾಠ ಕಲಿಸಿತು. ಚಳುವಳಿಯ ಆರಂಭದಲ್ಲಿ ಕಂಡ ಸೋಲನ್ನು ಸವಾಲಾಗಿ ಸ್ವೀಕರಿಸಿತು. ತರುಣರ ತಂಡ ನಂತರದ ದಿನಗಳಲ್ಲಿ, ಚಳುವಳಿಯ ವಿಧ್ವಂಸಕ ಕಾರ್ಯಗಳಿಗೆ ಅನೇಕ ಕಾರ್ಯತಂತ್ರಗಳನ್ನು ಹೆಣೆಯಿತು.

**೩.೧೨. ತಾರ ತಂತಿಯ ವಿಜಯ ಕಾಂಡ :**

ಗ್ರಾಮಕ್ಕೆ ಹಿಂತಿರುಗಿದ ತರುಣರಿಗೆ ಚಳುವಳಿಯ ಹುಚ್ಚೇ ಹಿಡಿದ್ದಿತ್ತು. ಏನನ್ನಾದರೂ ಮಾಡಬೇಕು ಎನ್ನುವ ಹವಣಿಕೆಯಲ್ಲಿದ್ದರು. ಆಗ ಮೂಡಿ ಬಂತು, ಕುಡಚಿ-ಜಮಖಂಡಿ ರಸ್ತೆಯಲ್ಲಿರುವ ತಾರ ತಂತಿಯನ್ನು ಕತ್ತರಿಸುವ ಯೋಜನೆ. ಚಳುವಳಿಕಾರರ ತಂಡ ಹಾರೂಗೇರಿ ಕ್ರಾಸ್‌ನಿಂದ ಯಬರಟ್ಟಿಯ ವರೆಗೆ ಇರುವ, ಸುಮಾರು ೩-೪ ಕೀ.ಮೀ. ಅಂತರದ ರಸ್ತೆ ಗುಂಟ ಇರುವ ತಾರ ತಂತಿಯನ್ನು ಕಡಿಯುವ ಯೋಜನೆಯನ್ನು ಹಾಕಿಕೊಂಡರು. ಹಿಡಕಲ್ಲದ ಸ್ವಾತಂತ್ರ್ಯ ಯೋಧರ ತಂಡ ಮತ್ತು ನೆರೆ-ಹೊರೆ ಗ್ರಾಮಗಳ ತರುಣರ ಪಡೆ ಈ ಕಾರ್ಯದಲ್ಲಿ ಭಾಗವಹಿಸಿತ್ತು. ರಾತ್ರಿ ೮ ಗಂಟೆ ಸುಮಾರಿಗೆ ಚಳುವಳಿಕಾರರು ೨-೩ ಜನರಿಂದ ಕೂಡಿದ ಚಿಕ್ಕ-ಚಿಕ್ಕ ತಂಡಗಳಲ್ಲಿ, ಹಾರೂಗೇರಿ ಕ್ರಾಸ್‌ಗೆ ತಲುಪಲು ಪ್ರಯಾಣವನ್ನು ಆರಂಭಿಸಿದರು.

ಗ್ರಾಮದಿಂದ ಕೇವಲ ೮-೧೦ ಕೀಲೋ ಮೀಟರದಲ್ಲಿರುವ ಹಾರೂಗೇರಿ ಕ್ರಾಸ್‌ಗೆ, ಒಂದು ತಾಸಿನ ಕಾಲ್ನಡಿಗೆಯಲ್ಲಿ ಬಂದು ಮುಟ್ಟಿದರು. ಆ ಪ್ರದೇಶವು ಇನ್ನೂ ಜನರಿಂದ ಕೂಡಿತ್ತು, ಜನ ಸಂಚಾರ ಕಡಿಮೆಯಾಗುವವರೆಗೆ ಅಲ್ಲಿಯೇ ಗುಂಪು-ಗುಂಪಾಗಿ ನಿಂತುಕೊಂಡರು. ರಾತ್ರಿ ಸುಮಾರು ೧೧ ಗಂಟೆಗೆ ರಸ್ತೆಯಲ್ಲಿ ಜನ ಸಂಚಾರ ಸಂಪೂರ್ಣವಾಗಿ ನಿಂತು ಹೋಯಿತು. ಚಳುವಳಿಕಾರರು ತಡ ಮಾಡದೇ ತಮ್ಮ ಕಾರ್ಯಕ್ಕೆ

ಮುಂದಾದರು. ೧೫೦ ಅಡಿಗೆ ಒಂದರಂತೆ ಇರುವ ತಾರ ಕಂಬಗಳನ್ನು ಹೊಡೆದು ಉರಿಳಿಸುವ ಕೆಲಸ ಆರಂಭವಾಯಿತು. ಕೆಲವರು ತಾರ ಕಂಬಗಳನ್ನು ಹೊಡೆದುರುಳಿಸುವ ಕಾರ್ಯದಲ್ಲಿ ತೊಡಗಿದರೆ, ಇನ್ನೂ ಕೆಲವರು ಕೆಳಗುರುಳಿದ ತಾರ ಕಂಬಗಳಿಗಿದ್ದ ತಾರ ತಂತಿಯನ್ನು ಕಿತ್ತು ಕಲೆ ಹಾಕುವ ಕಾಯಕದಲ್ಲಿ ನಿರತರಾದರು. ಎರಡು-ಮೂರು ಗಂಟೆಯ ಅವಧಿಯಲ್ಲಿ ಸುಮಾರು ೩ ಕೀಲೋ ಮೀಟರ ಅಂತರದ ವರೆಗೆ ಇರುವ ತಾರ ಕಂಬಗಳನ್ನು ಕೆಳಕ್ಕುರುಳಿಸಿ, ತಂತಿ ಕತ್ತರಿಸುವ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದರು.

ಯೋಧರ ತಂಡವು ಕಂಬಗಳಿಂದ ಕತ್ತರಿಸಿದ್ದ ತಾರ ತಂತಿಯನ್ನು ವಿಜಯೋತ್ಸವದೊಂದಿಗೆ ರಾತೋರಾತ್ರಿಯೇ ಹೊತ್ತುಕೊಂಡು, ಗ್ರಾಮಕ್ಕೆ ತಂದರು. ಬಸಪ್ರಭು ದುಂಡಪ್ಪ ದಲಾಲ ಕಂಬಗಳಿಂದ ಕತ್ತರಿಸಲ್ಪಟ್ಟ ತಾರ ತಂತಿಯನ್ನು ತಮ್ಮ ಮನೆಗೆ ಒಯ್ದು ಮುಚ್ಚಿಟ್ಟರು. ಹೇಗೋ ಈ ಸುದ್ದಿ ಪೋಲೀಸರಿಗೆ ತಿಳಿಯಿತು. ತಾರ ತಂತಿಯನ್ನು ಮತ್ತು ಅದನ್ನು ಕತ್ತರಿಸಿದವರ ಶೋಧನೆಗೆ ಪೋಲೀಸರ ತಂಡ ಗ್ರಾಮಕ್ಕೆ ಆಗಮಿಸುವ ಸುದ್ದಿ ಬಹುಬೇಗನೇ ಹರಡಿತು. ಸುದ್ದಿ ತಿಳಿಯುತ್ತಲೇ ಎಲ್ಲಾ ಹೋರಾಟಗಾರರು ಭೂಗತರಾದರು.

ಎರಡನೆಯ ದಿನವೇ ಪೋಲೀಸರ ತಂಡ, ಚಳುವಳಿಕಾರರ ಶೋಧನೆಗಾಗಿ, ಗ್ರಾಮಕ್ಕೆ ಆಗಮಿಸಿತು. ಸಂಶಯಾಸ್ಪದ ವ್ಯಕ್ತಿಗಳ ಮನೆಯನ್ನು ಅವರು ಜಪ್ತಿ ಮಾಡಲು ಆರಂಭಿಸಿದರು. ಪೋಲೀಸರು ಗ್ರಾಮಕ್ಕೆ ಆಗಮಿಸಿ ಶೋಧನಾ ಕಾರ್ಯದಲ್ಲಿ ತೊಡಗಿದ್ದು, ಒಂದು ರೀತಿ ಭಯದ ವಾತಾವರಣವನ್ನೇ ನಿರ್ಮಿಸಿತು, ಎಲ್ಲೆಲ್ಲೂ ಗಸು-ಗಸು ಮಾತುಗಳು ಕೇಳಲಾರಂಭಿಸಿದವು. ಪೋಲೀಸರಿಂದ ನಡೆದ ಶೋಧನಾ ಕಾರ್ಯದ ಸುದ್ದಿ ತಿಳಿಯುತ್ತಲೇ ಬಸಪ್ರಭು ದುಂಡಪ್ಪ ದಲಾಲರ ತಾಯಿಗೆ ಇನ್ನಿಲ್ಲದ ಭಯ ಆವರಿಸಿತು. ಮನೆಯಲ್ಲಿ ಯಾರು ಇಲ್ಲ, ಆದರೆ ಮನೆಯಲ್ಲಿ ಒಂದೆರೆಡು ದಿನಗಳ ಹಿಂದೆ ಕತ್ತರಿಸಿ ತಂದ ತಾರ ತಂತಿ ಇದೆಯಲ್ಲಾ! ಏನು ಮಾಡುವುದು? ಇನ್ನೇನು ಗತಿ? ಹೃದಯದಲ್ಲಿ ತಳಮಳ, ಹೇಗಾದರೂ ಮಾಡಿ ಆ ತಾರ ತಂತಿಯನ್ನು ಮನೆಯಿಂದ ಹೊರಗೆ ಸಾಗಿಸಬೇಕೆಂದು ನಿರ್ಧರಿಸಿದಳು.

ಸರ-ಸರನೆ ಮನೆಯಲ್ಲಿದ್ದ ಬಟ್ಟೆಗಳನ್ನು ಒಂದೆಡೆ ಕೂಡಿ ಹಾಕಿದಳು. ಒಂದು ದೊಡ್ಡ ಬಟ್ಟೆಯಲ್ಲಿ ತಾರ ತಂತಿಯನ್ನು ಮುಚ್ಚಿಟ್ಟುಕೊಂಡು ಅವನ್ನೆಲ್ಲ ಒಂದು ದೊಡ್ಡ ಬುಟ್ಟಿಯಲ್ಲಿ ತುಂಬಿಕೊಂಡು ಬಾವಿಗೆ, ಬಟ್ಟೆ ತೊಳೆಯುವ ನೆಪ ಮಾಡಿ ಆ ತಂತಿಯನ್ನು ಮನೆಯಿಂದ ಹೊರಗೆ ತಂದಳು. ಮನೆಯ ಬಾಗಿಲನ್ನು ಮುಚ್ಚಿ, ಚಿಲಕವನ್ನು ಹಾಕದೇ ಧಾವಂತದಿಂದ ಊರ ಹೊರಗೆ ನಡೆದಳು. ಊರಿನ ಸ್ವಲ್ಪ ದೂರದಲ್ಲಿಯೇ ಯಮನಪ್ಪ ಬನಹಟ್ಟಿ ಯವರಿಗೆ ಸಂಬಂಧಿಸಿದ ಜಮೀನಿನಲ್ಲಿ ಒಂದು ಆಳವಾದ ಬಾವಿ ಇತ್ತು. ಅದನ್ನು ಈಗಲೂ ಆಳಪ್ಪನ ಬಾವಿ ಎಂದು ಕರೆಯುತ್ತಾರೆ. ಬಾವಿಗೆ ಬಂದು ತಲುಪಿದ ತಾಯಿ, ತನ್ನನ್ನು ಯಾರಾದರೂ ಗಮನಿಸುತ್ತಿದ್ದಾರೆಯೇ ಎಂಬುದನ್ನು ಖಚಿತ ಪಡಿಸಿಕೊಂಡಳು. ಯಾರು ತನ್ನನ್ನು ಗಮನಿಸುತ್ತಿಲ್ಲ ಎಂಬುದನ್ನು ತಿಳಿದುಕೊಂಡು ಸರ-ಸರನೆ ಬಾವಿಯಲ್ಲಿ

ಇಳಿದು ಮೊದಲು ಬಟ್ಟೆಯಲ್ಲಿ ಮುಚ್ಚಿಟ್ಟುಕೊಂಡು ಬಂದ ತಾರ ತಂತಿಯನ್ನು ಬಾವಿಗೆಸೆದಳು. ಬಂದೊದಗಿದ ಗಂಡಾಂತರದಿಂದ ಪಾರಾದಳು. ಎದೆಯ ಮೇಲಿರುವ ಗುಡ್ಡದ ಬಾರವೊಂದು ಕರಗಿದಂತಾಯಿತು. ಮನದಲ್ಲಿಯೇ ದೇವರನ್ನು ನೆನೆದಳು.

ಬಾವಿಗೆ ತಂದ ಬಟ್ಟೆಗಳನ್ನು ತೊಳೆದ ಶಾಸ್ತ್ರ ಮಾಡಿ ಬುಟ್ಟಿಯಲ್ಲಿ ತುಂಬಿಕೊಂಡು ಮನೆಗೆ ಬಂದಳು. ಆಗಲೇ ಪೋಲಿಸರು ಇವರ ಮನೆಯನ್ನು ಶೋಧಿಸಿ ಮುಂದಿನ ಮನೆಗಳ ಶೋಧನಾ ಕಾರ್ಯದಲ್ಲಿ ತೊಡಗಿದ್ದರು. ತಾಯಿಗೆ ಮಹತ್ತರ ಕಾರ್ಯವೊಂದನ್ನು ತಾನು ಮಾಡಿ ಯಶಸ್ವಿಯಾದ ಬಗ್ಗೆ ಮನದಲ್ಲಿ ಸಂತಸ. ಬಂದ ದಾರಿಗೆ ಸುಂಕವಿಲ್ಲವೆಂಬ ನಾಣ್ಣುಡಿಯಂತೆ ಪೊಲೀಸರಿಗೆ ಯಾವ ಚಳುವಳಿಕಾರರು ಮತ್ತು ತಾರ ತಂತಿಯು ಸಿಗದೇ ಬರಿಗೈಯಲ್ಲೇ ಸಪ್ಪೆ ಮೊರೆಯೊಂದಿಗೆ ಠಾಣೆಗೆ ಹಿಂತಿರುಗುವಂತಾಯಿತು.

ಈಗ ಸುಮಾರು ೧೦-೧೨ ವರ್ಷಗಳ ಹಿಂದೆ ಆ ಬಾವಿಯನ್ನು ಸ್ವಚ್ಚಗೊಳಿಸುವ ಸಂದರ್ಭದಲ್ಲಿ ಆ ತಾರ ತಂತಿಯು ಮಾಲೀಕರಿಗೆ ದೊರೆಯಿತು. ಸುಮಾರು ೧೫ ಕೀಲೋದಷ್ಟು ತೂಕದ ತಾಮ್ರದ ತಾರ ತಂತಿಯು ಅದಾಗಿತ್ತು. ಇದು ಹಿಡಕಲ್ಲ ಸ್ವಾತಂತ್ರ್ಯ ಯೋಧರ ಹೋರಾಟದ ಪ್ರಥಮ ವಿಜಯವಾಗಿತ್ತು. ಕೆಲವು ದಿನಗಳ ನಂತರದಲ್ಲಿ "ಕುಡಚಿ ಹತ್ತಿರ ತಂತಿ ಕತ್ತಿರಿಸುವಾಗ ಸತ್ತಿಯ ಶ್ರೀ ಕುಲಕರ್ಣಿ ಆದಿಯಾಗಿ ಕೆಲವು ಹೋರಾಟಗಾರರು ಬಂಧಿತರಾದರು".[೧೯]

**೩.೧೩. ರಾಯಬಾಗ ರೈಲು ನಿಲ್ದಾಣದ ದಹನಕಾಂಡ :**

"ಆಂಗ್ಲ ಆಡಳಿತಯಂತ್ರ ವಿಧ್ವಂಸನಕಾರ್ಯಕ್ಕೆ ಗಾಂಧಿಜೀಯವರ ಅನುಮತಿಯಿದೆ ಎಂಬ ಪ್ಯಾರೆಲಾಲ್‌ರ ಸಂದೇಶವೇ ರಾಯಬಾಗ ರೈಲು ನಿಲ್ದಾಣದ ಅಗ್ನಿಕಾಂಡಕ್ಕೆ ಸ್ವಾತಂತ್ರ್ಯ ಹೋರಾಟಗಾರರನ್ನು ಪ್ರೇರೇಪಿಸಿತು. ಸಂಕೇಶ್ವರದ ಅಪ್ಪಣ್ಣಗೌಡರ ನೇತೃತ್ವದಲ್ಲಿ, ಕಮತನೂರು ಸಮೀಪದ ಮಾವಿನ ತೋಟದಲ್ಲಿ ಸಭೆ ಸೇರಿದ ಕ್ರಾಂತಿವೀರರು, ರಾಯಬಾಗ ರೈಲು ನಿಲ್ದಾಣವನ್ನು ಅಗ್ನಿಗೆ ಅರ್ಪಿಸುವ ಯೋಜನೆ ರೂಪಿಸಿದರು. ಅನಂತರ ಅವರೆಲ್ಲರೂ ಅಪ್ಪಣ್ಣಗೌಡರ ನೇತೃತ್ವದಲ್ಲಿ ರಾಯಬಾಗದೆಡೆಗೆ ಪ್ರಯಾಣ ಬೆಳೆಸಿದರು. ನಿಡಸೋಸಿ ನಿಜಲಿಂಗೇಶ್ವರರ ಆಶಿರ್ವಾದ ಹಾಗೂ ಪ್ರಸಾದದ ಬುತ್ತಿ ಪಡೆದು ಅಮ್ಮಿನಭಾವಿ ಅಪ್ಪಾಸಾಹೇಬ ಪಾಟೀಲರ ಮನೆಗೆ ಬಂದರು. ಅಲ್ಲಿ ನೇತಾರರು ಕಾರ್ಯಕರ್ತರನ್ನು ಚಿಕ್ಕ ಚಿಕ್ಕ ಗುಂಪುಗಳಲ್ಲಿ ವಿಂಗಡಿಸಿ ಸರಕಾರಕ್ಕೆ ತಿಳಿಯದಂತೆ ಕಾಡು ದಾರಿಯ ಮೂಲಕ ರಾಯಬಾಗ ನಿಲ್ದಾಣಕ್ಕೆ ಬರಲು ಸೂಚಿಸಿದರು.

ಬೆಳಗಿನ ಜಾವ ಎಲ್ಲರೂ ಜೋಡಟ್ಟಿಯ ಚೆನ್ನಮಲ್ಲಪ್ಪ ಬಸ್ತವಾಡೆಯವರ ತೋಟ ತಲುಪಿದರು". [೨೦] ಪೂರ್ವ ಯೋಜನೆಯಂತೆ, ಹಿಡಕಲ್ಲದ ಸ್ವಾತಂತ್ರ್ಯ ಸೇನಾನಿ

ತಂಡದವರು ಮತ್ತು "ಹೆಬ್ಬಾಳದ ಶ್ರೀ ಶಿವಪ್ಪಾ ಗುಂಡಾಳಿ, ಚನ್ನಯ್ಯಾ ಮಠಪತಿ, ದುಂಡಯ್ಯಾ ಮಠಪತಿ, ಪರಪ್ಪಾ ಖೋತ, ಮಲ್ಲಯ್ಯಾ ಮಠಪತಿ, ಮಹಮ್ಮದ ಅತ್ತಾರ, ಸಿದ್ದಪ್ಪಾ ಯಮಕನಮರ್ಡಿ, ಲಕ್ಷ್ಮಣ ನಾವಲಗಿ, ದುಂಡಪ್ಪಾ ಕುಂಬಾರ, ರಾಯಪ್ಪಾ ಬಾಳಿಕಾಯಿ, ಬಸವಂತ ಚಿಗರಿ",[೨೧] ಹಾಗೂ ರಾಯಬಾಗದ ಬಾಳಪ್ಪ ನಾಯಿಕ ಮಾಸ್ತರ, ಶಿವಪ್ಪ ನಿಂಗನೂರೆ, ಶಿವಲಿಂಗ ಸಂಕಪಾಳೆ, ಆದಪ್ಪ ಬನೂಸೆ, ಗುಂಡೋಪಂತ ಕುಲಕರ್ಣಿ, ಬೈರೂ ಪರೀಟ, ಶಂಕರ ಸಂಸುದ್ದಿ, ಬಾಪೂಗೌಡ ಪೂಜಾರಿ, ಬೇಡಕಿಹಾಳದ ಸಿದಗೌಡ ಪಾಟೀಲ, ಮಾಂಜರಿಯ ಅಪ್ಪಾಸಾಬ ಪಾಟೀಲ, ಮುಂತಾದ ೫೦ ಸೇನಾನಿಗಳು ಆಗಲೇ ಅಲ್ಲಿ ಸೇರಿದ್ದರು. ಹಗಲು ಕಳೆದು, ದೀಪ ಹೊತ್ತುವ ಹೊತ್ತು ಮತ್ತೆ ಪ್ರಯಾಣ ಆರಂಭಿಸಿದರು.

"ಮಧ್ಯ ರಾತ್ರಿ ೨ ಗಂಟೆಗೆ ರಾಯಬಾಗ ರೈಲು ನಿಲ್ದಾಣಕ್ಕೆ ಬೆಂಕಿ ಇಡಲು ನಿರ್ಧರಿಸಿದರು. ಕಲ್ಲು, ಮುಳ್ಳಿನ ಕಾಡು ದಾರಿ ತುಳಿದ ಕೇಲವರ ಕಾಲಿಗೆ ಬೊಕ್ಕೆ ಎದ್ದು ನೋವಿನಿಂದ ನರಳುತ್ತಿದ್ದರು. ಅನುಯಾಯಿಗಳ ಕಷ್ಟ ಕಂಡು ಅಪ್ಪಣ್ಣಗೌಡರು ಮಮ್ಮಲಮರುಗಿದರು. ಆದರೆ ಯೋಜಿಸಿದ ಕಾರ್ಯ ಬಿಡುವಂತಿರಲಿಲ್ಲ. ನಿದ್ರೆ, ಆಯಾಸ-ಪ್ರಯಾಸಗಳನ್ನು ಲೆಕ್ಕಿಸದೆ ರಾತ್ರಿಯುದ್ದಕ್ಕೂ ದಾರಿ ತುಳಿದು ರಾಯಬಾಗ ರೈಲು ನಿಲ್ದಾಣ ತಲುಪಿದಾಗ ಬೆಳಗಿನ ಜಾವ ಮೂರು ಗಂಟೆಯಾಗಿತ್ತು. ಖಾದಿಧಾರಿಗಳು ಯೋಜಿಸಿದಂತೆ ೬-೧೧-೧೯೪೨ರಂದು ಎಣ್ಣೆ ಉಗ್ಗಿ ರೈಲು ನಿಲ್ದಾಣಕ್ಕೆ ಬೆಂಕಿಯಿಟ್ಟು ದೀಪಾವಳಿ ಆಚರಿಸಿದರು. ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಅವಿಸ್ಮರಣೀಯ ಘಟನೆಯಿದು".[೨೨]

"ದಾಳಿಯ ದಿವಸ ರೈಲು ನಿಲ್ದಾಣದಲ್ಲಿ ಪೊಲೀಸರ ಕಾವಲು ಇದ್ದಿತಲ್ಲದೆ ಹನ್ನೆರಡು ದೇವರ ಪಾಲಿಕೆಗಳನ್ನು ತಕ್ಕೊಂಡು ಜಾತ್ರೆಗೆ ಹೊರಟ ನೂರಾರು ಕುರುಬರು ಪ್ಲಾಟಫಾರ್ಮಿನ ಮೇಲೆ ಕುಳಿತುದ್ದರು. ಪೊಲೀಸರನ್ನು ಬಂಧಿಸಿ ಪ್ಲಾಟಫಾರ್ಮಿನ ಮೇಲಿನ ಸುಮಾರು ಇನ್ನೂರು ಮುನ್ನೂರು ಜನರನ್ನು ಒಂದು ಬದಿಗೆ ಕೂಡ್ರಿಸಿ ಸ್ಟೇಶನಿಗೆ ಬೆಂಕಿ ಹಚ್ಚಲಾಯಿತು. ಕಾರ್ಯವನ್ನು ಲಗುಬಗೆಯಿಂದ ಮುಗಿಸುವ ಅವಸರದಲ್ಲಿ, ಶಿವಪ್ಪಾ ಗುಂಡಾಳಿಯವರು ಒಳಗೆ ಇದ್ದುದನ್ನು ಗಮನಿಸದೇ ಬೆಂಕಿ ಹಚ್ಚಲ್ಪಟ್ಟಿದ್ದರಿಂದ ಅವರು ಹೊರಗೆ ಬರುವಾಗ ಮೈಸುಟ್ಟುಕೊಂಡರು. ಅವರನ್ನು ಅಂಕಲಗಿಗೆ ಸಾಗಿಸಿ ಶ್ರೀ ಕೋರೆಯವರ ಬಂಗ್ಲೆಯಲ್ಲಿ ಉಪಚರಿಸಲಾಯಿತು. ಅಂದು ರಾಯಬಾಗ ಸ್ಟೇಶನದಲ್ಲಿ ನೂರಾರು ಪ್ರಯಾಣಿಕರು ಇದ್ದರೂ ಅವರಾರೂ ಚಕಾರ ಶಬ್ದ ತೆಗೆಯದೆ ಸ್ಟೇಶನ್ನು ಸುಡುವುದನ್ನು ಕುತೂಹಲದಿಂದ ನೋಡಿದರು".[೨೩] ಸಂಕೇಶ್ವರದ ಅಪ್ಪಣ್ಣಗೌಡರ ನೇತೃತ್ವದಲ್ಲಿನ ತಂಡದ ಜೊತೆಗೂಡಿ, ಹಿಡಕಲ್ಲದ ಸ್ವಾತಂತ್ರ್ಯ ಸೇನಾನಿಗಳು ಮಾಡಿದ ಈ ಘಟನೆ ನಿಜಕ್ಕೂ ಬಾಗಿ ನಾಡಿನ, ಐತಿಹಾಸಿಕ ದಾಖಲೆಯಾಗಿದೆ.

**೩.೧೪. ಸುಲದಾಳ ರೈಲು ನಿಲ್ದಾಣ ಮತ್ತು ಯಲಪಾರಟ್ಟಿ ಬಂಗಲೆಗಳ ಅಗ್ನಿಕಾಂಡ :**

ಅಕ್ಕತಂಗೇರಹಾಳ ಮತ್ತು ಪಾಶ್ಚಾಪೂರದ ಸ್ವಾತಂತ್ರ್ಯ ಚಳುವಳಿಗಾರರ ತಂಡವು ಅಣ್ಣು ಗುರೂಜಿಯವರ ನೇತೃತ್ವದಲ್ಲಿ, ಸುಲದಾಳ ಸ್ಟೇಶನ್ನು ಹಗಲು ಹನ್ನೆರಡು ಗಂಟೆಗೆ, ಅದೂ ಸಂತೆಯ ದಿನ, ಸುಟ್ಟು ಹಾಕಿತು. ಈ ವಿಧಾಯಕ ಕಾರ್ಯದಲ್ಲಿ ಹಿಡಕಲ್ಲದ ಸ್ವಾತಂತ್ರ್ಯ ಯೋಧರ ಪಡೆ ಭಾಗವಹಿಸಿತ್ತು. ಅಥಣಿಯ ಮತ್ತು ಸತ್ತಿ ಊರಿನ ಸ್ವಾತಂತ್ರ್ಯ ಸೇನಾನಿಗಳ ಜೊತೆಗೂಡಿದ ಹಿಡಕಲ್ಲದ ಸೇನಾನಿಗಳು ಯಲ್ಪಾರಟ್ಟಿ ಬಂಗಲೆ ಸುಡುವ ಕಾರ್ಯದಲ್ಲಿ ಭಾಗವಹಿಸಿದ್ದರು. ಈ ಎರಡು ಘಟನೆಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಣೆಗಳು ಲಿಖಿತ ದಾಖಲೆಗಳಲ್ಲಾಗಲಿ ಅಥವಾ ಹೋರಾಟಗಾರರ / ಹಿರಿಯರ ಸಂದರ್ಶನದ ವೇಳೆಯಲ್ಲಿ ದೊರೆತಿರುವುದಿಲ್ಲ.

**೩.೧೫. ೧೯೪೨ರ ಚಲೇಜಾವ ಚಳುವಳಿ :**

ಆರಂಭದಲ್ಲಿ ಹೋರಾಟಗಾರರಿಗೆ ಗ್ರಾಮದ ಜನರಿಂದ ಸಾಕಷ್ಟು ಬೆಂಬಲ ದೊರೆಯಲಿಲ್ಲ. ಆದರೆ ದಿನಗಳೆದಂತೆ ಚಳುವಳಿಯ ವ್ಯಾಪಕತೆಯಿಂದಾಗಿ, ಚಳುವಳಿಯ ನಾಯಕರು ಗ್ರಾಮಗಳಿಗೆ ಬಂದು ಸಭೆ ಸಮಾರಂಭಗಳನ್ನು ನಡೆಸುವುದರ ಮೂಲಕ ಸ್ವಾತಂತ್ರ್ಯದ ಅರಿವಿನ ಹಣತೆ ಹಚ್ಚಿದ್ದರಿಂದ ಗ್ರಾಮಕ್ಕೆ-ಗ್ರಾಮವೇ ಇವರ ಬೆನ್ನ ಹಿಂದೆ ನಿಂತುಕೊಂಡಿತು. ಅಲ್ಲದೆ ಸ್ವಾತಂತ್ರ್ಯ ಸೇನಾನಿಗಳ ಗುಪ್ತ ಚಟುವಟಿಕೆಗಳಿಗೆ ಪೂರಕ ವ್ಯವಸ್ಥೆಯನ್ನು ಒದಗಿಸಲು ಮುಂದೆ ಬಂದರು. ಗ್ರಾಮದಲ್ಲಿ ತರುಣ ಹೋರಾಟಗಾರರ ಪಡೆಯೊಂದು ರಚನೆಗೊಂಡಿತು. ದೇಶದ ತುಂಬೆಲ್ಲ ಅಂದು ಸ್ವಾತಂತ್ರ್ಯಕ್ಕಾಗಿ ಹಾಹಾಕಾರ ಎದ್ದಿತು, ದೇಶದ ತರುಣರೆಲ್ಲರಲ್ಲಿ ಹೊಸ ಹುಮ್ಮಸು ಹುಟ್ಟಿ ದೇಶಕ್ಕಾಗಿ ದುಡಿಯ ಬೇಕೆಂಬ ಭಾವವು ಬಲಿಯಿತು. ತರುಣ ಹೋರಾಟಗಾರರ ಬೆಂಬಲಕ್ಕೆ ಗ್ರಾಮದಲ್ಲಿಯ ಜನತೆಯಿಂದ ಅಭೂತ ಪೂರ್ವ ಬೆಂಬಲ ದೊರೆಯಿತು. ೧೯೪೨ರ ಚಲೇಜಾವ ಚಳುವಳಿಯ ಸಂದರ್ಭದಲ್ಲಿ ಗ್ರಾಮದಲ್ಲಿ ಸಂಗ್ರಾಮದ ಕಿಚ್ಚು ಬಲವಾಗಿತ್ತು. ಗ್ರಾಮದ ಜನರೆಲ್ಲ ಚಳುವಳಿಯಲ್ಲಿ ಧುಮುಕಿದ್ದರು.

೧೯೪೨ರ ಚಲೇಜಾವ ಚಳುವಳಿಯ ಪೂರ್ವದಲ್ಲಿ, ಸ್ವದೇಶಿ ಚಳುವಳಿಯ ಭಾಗವಾದ ಉಪ್ಪಿನ ಸತ್ಯಾಗ್ರಹದಲ್ಲಿ, ಮೈಲಾರ ಮಹಾದೇವಪ್ಪ ಇವರ ನೇತೃತ್ವದಲ್ಲಿ ಅಂಕೋಲಾದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹ ಚಳುವಳಿಯಲ್ಲಿ ರಾಮಣ್ಣ ಕಂಕಣವಾಡಿ, ಇಮಾಮಸಾಹೇಬ ಮುಲ್ಲಾ ಮತ್ತು ಭೀಮಪ್ಪ ಬಡಿಗೇರ ಭಾಗವಹಿಸಿದ್ದರು. ಆರಂಭದಲ್ಲಿ ರಾಮಣ್ಣ ಕಂಕಣವಾಡಿ, ಈ ಎಲ್ಲಾ ಹೋರಾಟಗಳಲ್ಲಿ ಮೂಂಚೂಣಿಯಲ್ಲಿದ್ದರು. ಆರಂಭದ ಎಲ್ಲಾ ಚಳುವಳಿ ಮತ್ತು ಚಟುವಟಿಕೆಗಳ ರೂವಾರಿ ರಾಮಣ್ಣ ಕಂಕಣವಾಡಿ ಯವರೇ ಆಗಿದ್ದರು. ಆದರೆ ೧೯೪೨ರ ಚಲೇಜಾವ ಚಳುವಳಿಯ ಸಂದರ್ಭದಲ್ಲಿ ಮಾತ್ರ ಇಮಾಮಸಾಹೇಬ ಮುಲ್ಲಾ ರವರು ಪ್ರಮುಖ ಸ್ಥಾನದಲ್ಲಿ ನಿಂತು ಹೋರಾಟದ ಮುಂದಾಳತ್ವವನ್ನು ವಹಿಸಿಕೊಂಡರು.

೧೯೪೨ರ ಚಲೇಜಾವ ಚಳುವಳಿಯ ಹೋರಾಟದ ಅಂಗವಾಗಿ ಗ್ರಾಮದಲ್ಲಿ ಸಭೆ-ಸಮಾರಂಭಗಳನ್ನು ಆಯೋಜಿಸಲಾಗುತ್ತಿತ್ತು. ಪ್ರಭಾತಪೇರಿ ಮಾಡುವುದು, ಶಾಲಾ ವಿದ್ಯಾರ್ಥಿಗಳಿಂದ ಕರಪತ್ರಗಳನ್ನು ಬರೆಸುವುದು ಮತ್ತು ಹಂಚುವ ಚಟುವಟಿಕೆಗಳು ನಡೆಯುತ್ತಿದ್ದವು. ಮುದ್ರಣ ಯಂತ್ರಗಳೇ ಇಲ್ಲದ ಅಂದು ಚಳುವಳಿಕಾರರು, ಕರಪತ್ರಗಳನ್ನು ಸ್ವಃತ ಬರೆಯುವುದರ ಮೂಲಕವೇ ತಯಾರಿಸಬೇಕಾಗುತ್ತಿತ್ತು. ಪತ್ತಾರ, ದಲಾಲ ಮತ್ತು ಕದಮ ಮುಂತಾದ ಶಾಲಾ ವಿದ್ಯಾರ್ಥಿಗಳು ಕರಪತ್ರಗಳನ್ನು ಕೈಯಿಂದಲೇ ಬರೆದು ಸಿದ್ದ ಗೊಳಿಸುತ್ತಿದ್ದರು. ಸಿದ್ದಗೊಂಡ ಕರಪತ್ರಗಳನ್ನು ಗುಪ್ತ ರೀತಿಯಲ್ಲಿ ಹಂಚುವ ಕಾರ್ಯವು ಕೂಡ ನಡೆಯುತ್ತಿತ್ತು. ಕರಪತ್ರಗಳನ್ನು ಸಿದ್ದಗೊಳಿಸುವ ಕೇಂದ್ರ ಹಿಡಕಲ್ಲ ಆಗಿತ್ತು. ಅಷ್ಟು ದೊಡ್ಡ ಪ್ರಮಾಣದಲ್ಲಿ ಕರಪತ್ರಗಳು ಸಿದ್ದಗೊಳ್ಳುತ್ತಿದ್ದವು.

ಗ್ರಾಮದಲ್ಲಿನ ಚಾವಡಿಗಳನ್ನು ಆಕ್ರಮಿಸಿ ಸರ್ಕಾರಿ ದಪ್ತರಗಳನ್ನು ಸುಡುವುದು, ಕಛೇರಿಗಳನ್ನು ಸುಡುವುದು, ತಾರ-ತಂತಿಗಳನ್ನು ಕತ್ತರಿಸುವುದು, ಸರ್ಕಾರದ ಖಜಾನೆಗಳನ್ನು ಲೂಟಿ ಮಾಡುವುದು, ಸ್ವಾತಂತ್ರ್ಯ ಯೋಧರ ಪ್ರಮುಖ ಕಾರ್ಯಯೋಜನೆಗಳಾಗಿದ್ದವು. ಹಾರೂಗೇರಿಯ ಸದಲಗಿ ಸಾಹುಕಾರರು ಮತ್ತು ಊರಿನ ಗೌಡರು ಈ ಹೋರಾಟಗಾರರ ತಂಡಕ್ಕೆ ಸಾಕಷ್ಟು ಬೆಂಬಲವನ್ನು ನೀಡಿದ್ದರು. ಅಲ್ಲದೆ ಆಗಾಗ ಸಹಾಯ, ಪ್ರೋತ್ಸಾಹವನ್ನು ಕೂಡ ಕೋಡುತ್ತಿದ್ದರು. ಅಂದು ಯಾರೂ ಕೂಡ ಹೋರಾಟಗಾರರ ಚಟುವಟಿಕೆಗಳಿಗೆ ತೊಂದರೆ ನೀಡುತ್ತಿರಲಿಲ್ಲ. ಅವರ ಯೋಜನೆಯ ಸಂಚುಗಳನ್ನು, ಸರ್ಕಾರದ ಗಮನಕ್ಕೆ ತರುವ ಕೆಲಸ ಮಾಡುತ್ತಿರಲಿಲ್ಲ. ಸಾಮಾನ್ಯ ಜನರೆಲ್ಲರೂ ಕೂಡ ಅಪ್ರತ್ಯಕ್ಷವಾಗಿ ಚಳುವಳಿಗಾರರಿಗೆ ಬೆಂಬಲವನ್ನು ನೀಡುತ್ತಿದ್ದರು. ಗ್ರಾಮದಲ್ಲಿರುವ ಎಲ್ಲರೂ ಒಂದಿಲ್ಲೊಂದು ಚಟುವಟಿಕೆಗಳ ಮೂಲಕ ಚಳುವಳಿಯಲ್ಲಿ ಭಾಗಿಗಳೇ ಆಗಿದ್ದರು. ಕೆಲವು ಹೋರಾಟಗಾರರು ಮುಂದೆ • ಬಂದು ನೇರ ಕಾರ್ಯಾಚರಣೆಗೆ ಇಳಿದು ಬಂಧಿತರಾದರೆ, ಅದೆಷ್ಟೋ ಜನ ಸರ್ಕಾರದ ಕಣ್ಣು ತಪ್ಪಿಸಿ ಸರ್ಕಾರದ ಆಡಳಿತ ಯಂತ್ರ ಕುಸಿಯುವಂತೆ ಮಾಡಲು ಪ್ರಯತ್ನಿಸಿದರು. ಮುಂದೆ ನಿಂತವರು ಪ್ರಚಾರಕ್ಕೆ ಬಂದರು, ಹಿಂದೆ ಇದ್ದವರು ಪ್ರಚಾರಕ್ಕೆ ಸಿಗಲಿಲ್ಲ. ಆದರೆ ಈ ಹೋರಾಟಗಾರರಿಗೆ ನೈತಿಕ ಬೆಂಬಲವನ್ನು, ಹಣಕಾಸಿನ ನೆರವನ್ನು ನೀಡಿದವರು ಜನಸಮಾನ್ಯರು.

**೩.೧೩. ೧೯೪೨ರ ಮುಂಬಯಿ ಅಖಿಲ ಭಾತರ ಕಾಂಗ್ರೇಸ್ ಅಧಿವೇಶನ :**

೧೯೪೨ ಅಗಸ್ಟ್ ೮ನೇ ತಾರೀಖಿನಂದು ಅಖಿಲ ಭಾರತ ಕಾಂಗ್ರೇಸ ಕಮಿಟಿಯು ಮುಂಬಯಿಯಲ್ಲಿ ಸಮಾವೇಶವಾಗಿತ್ತು. ಈ ಅಧೀವೇಶನದಲ್ಲಿ ಹಿಡಕಲ್ಲ ಗ್ರಾಮದಿಂದ ಇಮಾಮಸಾಹೇಬ ಮುಲ್ಲಾ, ರಾಮಪ್ಪ ಕಂಕಣವಾಡಿಯವರು ಭಾಗವಹಿಸಿದ್ದರು. ಇವರು ಮುಂಬಯಿಗೆ ದರೂರ ಗ್ರಾಮದ ನಿಂಗಪ್ಪ ಬಹದ್ದೂರ ದಳವಾಯಿ (ವಕೀಲರು),

ಮತ್ತು ಅಥಣಿಯ ಅನಂತ ಶಾಮರಾವ ಕುಲಕರ್ಣಿ, ಎ.ಜಿ.ಮಿರಜ, ಎಸ್.ಬಿ.ಕುಲಕರ್ಣಿ ಮೊದಲಾದವರ ಜೊತೆಗೂಡಿ ಅಧಿವೇಶನಕ್ಕೆ ಹೋಗಿದ್ದರು.

ಮಹಾತ್ಮ ಗಾಂಧೀಜಿಯವರು ಕಾಂಗ್ರೇಸ್ ಅಧಿವೇಶನದಲ್ಲಿ, ಬ್ರಿಟಿಷ ಸರ್ಕಾರದ ವಿರುದ್ಧ, "ಮಾಡು ಇಲ್ಲವೇ ಮಡಿ" ಎಂಬ ಘೋಷಣೆಯನ್ನು ಮಾಡಿದರು. ಈ ಮಂತ್ರ ಭಾರತದ ಕೆಚ್ಚೆದೆಯ ಸಾವಿರಾರು ಬಂಟರ ಎದೆಯನ್ನು ಭೇದಿಸಿ ಹೋರಾಟಕ್ಕೆ ಅಣಿಗೊಳಿಸಿತು. ಮಹಾತ್ಮ ಗಾಂಧಿಜೀಯವರ ಕರೆಯಿಂದಾಗಿ ಸಾವಿರಾರು ಹೋರಾಟಗರರು, ಸ್ವಾತಂತ್ರ್ಯದ ದಿಕ್ಷೆ ತೊಟ್ಟು ವಿಧಾಯಕ ಕಾರ್ಯಕ್ರಮಗಳಲ್ಲಿ ತೋಡಗಿದರು. ದೇಶದ ಮೂಲೆ-ಮೂಲೆಗಳಿಗೆ ವಿಸ್ತರಿಸಿದ ಈ ಹೋರಾಟ, ಗ್ರಾಮದ ಬಾಗಿಲುಗಳನ್ನು ತಟ್ಟಿದವು. ಮಹಾತ್ಮ ಗಾಂಧೀಜಿಯವರ ಕರೆಗೆ ಎಲ್ಲ ಕಡೆಗಳಿಂದಲೂ ಬೆಂಬಲ ವ್ಯಕ್ತವಾಯಿತು. ಹೀಗಾಗಿ ಗ್ರಾಮ ಮಟ್ಟದಲ್ಲಿ ಯೋಧರು ತಮಗೆ ತಿಳಿದಂತೆ ಹೋರಾಟದ ಕಾರ್ಯಕ್ರಮಗಳನ್ನು ಹಾಕಿಕೊಂಡರು. ಮುಂಬಯಿ ಅಧಿವೇಶನದ ನಂತರ ಗ್ರಾಮಕ್ಕೆ ಹಿಂತಿರುಗಿದ, ರಾಮಪ್ಪ ಕಂಕಣವಾಡಿ ಮತ್ತು ಇಮಾಮಸಾಹೇಬ ಮುಲ್ಲಾರವರು ಸ್ವಾತಂತ್ರ್ಯ ಸಂಗ್ರಾಮದ ಕ್ರಾಂತಿಯ ಕಿಡಿಗಳಾದರು.

ಈ ಸಮಯದಲ್ಲಿ ೧೯೪೨ರ ಚಲೇಜಾವ ಚಳುವಳಿಯನ್ನು ಯಶಸ್ವಿಗೊಳಿಸುವುದಕ್ಕಾಗಿ ಅನೇಕ ಮುಂಖಡರು ಗ್ರಾಮ-ಗ್ರಾಮಗಳಿಗೆ ಭೇಟ್ಟಿಕೊಟ್ಟು ಗುಪ್ತ ಸಭೆಗಳನ್ನು ಮಾಡಿ, ತರುಣರನ್ನು ಪ್ರಚೋದಿಸಿ, ಯೋಧರ ಪಡೆಗಳನ್ನು ಕಟ್ಟಿ ಅವರನ್ನು ಸಂಗ್ರಾಮದಲ್ಲಿ ಧುಮುಕುವಂತೆ ಮಾಡುತ್ತಿದ್ದರು.

**೩.೧೭. ಅಥಣಿಯ ಅನಂತ ಕುಲಕರ್ಣಿಯವರಿಂದ ಹಿಡಕಲ್ಲದಲ್ಲಿ ಚಳುವಳಿಯ ಗುಪ್ತ ಸಭೆ :**

ಅಥಣಿಯ ಅನಂತ ಶಾಮರಾವ ಕುಲಕರ್ಣಿಯವರು ಮುಂಬಯಿಯಲ್ಲಿ ಜರುಗಿದ, ಅಖಿಲ ಭಾರತ ಕಾಂಗ್ರೇಸ ಕಮೀಟಿಯ ಅಧಿವೇಶನಕ್ಕೆ ಅಥಣಿ ತಾಲೂಕಿನ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಅಧಿವೇಶನದಲ್ಲಿ ಕೈಕೊಂಡ ನಿರ್ಣಯದಂತೆ, ಅವರು ಭಾರತ ಬಿಟ್ಟು ತೊಲಗಿರಿ ಮತ್ತು ಮಹಾತ್ಮ ಗಾಂಧೀಜಿಯವರು ಪ್ರತಿಪಾದಿಸಿದ ವಿಚಾರಗಳನ್ನು ಕಾರ್ಯರೂಪದಲ್ಲಿ ತರಲು ಕಾರ್ಯತತ್ಪರರಾದರು. ಬ್ರಿಟಿಷರೇ 'ಭಾತರ ಬಿಟ್ಟು ತೊಲಗಿರಿ' ಆಂದೋಲನವನ್ನು ಯಶಸ್ವಿಗೊಳಿಸವುದಕ್ಕಾಗಿ ಅವರು ಎರಡು ಸಲ ಹಿಡಕಲ್ಲ ಗ್ರಾಮಕ್ಕೆ ಭೆಟ್ಟಿಕೊಟ್ಟಿದ್ದರು. ೧೯೪೨ರ ಅಗಸ್ಟ ತಿಂಗಳಲ್ಲಿ ಪ್ರಥಮ ಬಾರಿಗೆ ಮತ್ತು ಸಪ್ಟೆಂಬರ ತಿಂಗಳ ಕೊನೆಯ ವಾರದಲ್ಲಿ ಎರಡನೆಯ ಬಾರಿಗೆ ಭೆಟ್ಟಿ ನೀಡಿದ್ದರು. ಈ ಸಮಯದಲ್ಲಿ ಅವರು ಮಧ್ವರಾಜ ದೇಶಪಾಂಡೆಯವರ ಮನೆಯಲ್ಲಿ ಚಳುವಳಿಕಾರರ ಸಭೆನಡೆಸಿ, ಚಳುವಳಿಯ ರೂಪ-ರೇಷೆಗಳನ್ನು ತಯಾರಿಸಿದರು. ಹಿಡಕಲ್ಲ ಗ್ರಾಮದಲ್ಲಿ ತರುಣರ ಪಡೆಯೊಂದನ್ನು

ನಿರ್ಮಿಸಿದರು. ಅಲ್ಲದೇ ಸಭೆಯಲ್ಲಿ ಗ್ರಾಮಸ್ಥರಿಗೆ ಮತ್ತು ಯುವಕರಿಗೆ ಚಳುವಳಿಯಲ್ಲಿ ಭಾಗವಹಿಸುವಂತೆ ಪ್ರಚೋದನೆಯನ್ನು ನೀಡಿದರು. ಅಂತೆಯೇ ಹಿಡಕಲ್ಲದ ಎಲ್ಲಾ ಸ್ವಾತಂತ್ರ್ಯ ಯೋಧರು ಈ ಸಭೆಯಲ್ಲಿ ಪಾಲ್ಗೊಂಡು ಪ್ರಭಾವಿತರಾದರು. ದೇಶ ಸೇವೆಗೆ, ಟೊಂಕ ಕಟ್ಟಿ ಹೋರಾಡುವ ಪ್ರತಿಜ್ಞೆಯನ್ನು ಗೈದರು. ಗ್ರಾಮದ ಅನೇಕರು ಈ ಹೋರಾಟದಲ್ಲಿ ಸಕ್ರೀಯವಾಗಿ ಭಾಗವಹಿಸಲು ಮುಂದಾದರು. ಚಳುವಳಿಕಾರರು ಹುರುಪಿನಿಂದಲೇ ಹೋರಾಟಕ್ಕೆ ಅಣಿಯಾದರು.

ಅನಂತ ಕುಲಕರ್ಣಿಯವರು, ಇಮಾಮಸಾಹೇಬ ಮುಲ್ಲಾ ಅವರ ಸಮ್ಮುಖದಲ್ಲಿ, ಸ್ಥಳಿಯ ಶಾಲಾ ಶಿಕ್ಷಕ, ಭೀಮಪ್ಪಾ ಬಡಿಗೇರ ಮತ್ತು ನಿಂಗಪ್ಪ ಕೊಕಟನೂರ ಇವರನ್ನು ವಿದ್ರೋಹಾತ್ಮಕ ಚಟುವಟಿಕೆಗಳಲ್ಲಿ ಭಾಗವಹಿಸಲು ಪ್ರಚೋದಿಸಿದರು. ಬ್ರಿಟಿಷ ಸರ್ಕಾರದ ವಿರುದ್ದ ಬರೆದ ಸಾಹಿತ್ಯವನ್ನು ವಿದ್ಯಾರ್ಥಿಗಳ ಮುಖಾಂತರ ಹರಡಲು ಸ್ಥಳಿಯ ಶಾಲಾ ಶಿಕ್ಷಕರ ಸಹಕಾರವನ್ನು ಕೊರಲಾಯಿತು. ವಿಧ್ವಂಸಕ ಚಟುವಟಿಕೆಗಳಾದಂತಹ ತಾರ ತಂತಿ ಕತ್ತಿರಿಸುವುದು ಮತ್ತು ರೈಲು ಹಳಿಗಳನ್ನು ತೆಗೆಯುವಂತಹ ಕಾರ್ಯಗಳಲ್ಲಿ ಭಾಗಿಯಾಗಲು ಭೀಮಪ್ಪ ಬಡಿಗೇರರನ್ನು ಪ್ರೇರೇಪಿಸಲಾಯಿತು. ಭೀಮಪ್ಪಾ ಬಡಿಗೇರ ಅವರಿಗೆ, ವಿದ್ವಂಸಕ ಚಟುವಟಿಕೆಗಳ ಯೋಜನೆಗಳನ್ನು ಕಾರ್ಯಗತ ಮಾಡುವಲ್ಲಿ ಉಪಯೋಗವಾಗುವ ಹಾಗೆ ಒಂದು ಪಿಸ್ತೂಲ ಕೊಡುವ ಬರವಸೆಯನ್ನು ಕೊಡಲಾಯಿತು. ಮತ್ತು ಆ ಪ್ರಕಾರವಾಗಿ ಒಂದು ಪಿಸ್ತೂಲನ್ನು ಕೂಡ ಅವರಿಗೆ ನಂತರದಲ್ಲಿ ಕೊಟ್ಟರು ಹೀಗಾಗಿ ಅವರ ಹತ್ತಿರ ದೇಶಿಯ ಪಿಸ್ತೂಲೊಂದು ಹೋರಾಟದ ಸಮಯದಲ್ಲಿತ್ತು.

**೩.೧೮. ಕೈ ಬರಹದ ಕರಪತ್ರಗಳ ಕಾರಬಾರು :**

ಅನಂತ ಕುಲಕರ್ಣಿಯವರ ಸಮ್ಮುಖದಲ್ಲಿ ನಡೆದ ಗುಪ್ತ ಸಭೆಗಳ ಪ್ರತಿಫಲವಾಗಿ, ಚಳುವಳಿಕಾರರಲ್ಲಿ ವೈಯಕ್ತಿಕವಾಗಿ ವಿಧ್ವಂಸಕ ಚಟುವಟಿಕೆಗಳನ್ನು ಕೈ ಕೊಳ್ಳುವಂತಹ ಒಳಸಂಚಿನ ಯೋಜನೆಗಳು ಮೊಳಕೆಯೊಡೆದವು. ಇದರ ಪರಿಣಾಮವಾಗಿ, ಹಿಡಕಲ್ಲ ಗ್ರಾಮದಲ್ಲಿ ಮೊದಲ ಬಾರಿಗೆ ಗೋಡೆಗಳ ಮೇಲೆ ಕರಪತ್ರಗಳು ಅಂಟಿಕೊಂಡಿದ್ದು ಕಂಡು ಬಂತು. ಸ್ಥಳೀಯ ಶಾಲೆಗಳ ಗೋಡೆಗಳ ಮೇಲೆ, ಚಾವಡಿಯ ಗೋಡೆಗಳ ಮೇಲೆ, ದೀಪ ಸ್ಥಂಭಗಳ ಮೇಲೆ ಮತ್ತು ಮಹಾರ ಓಣಿಯ ಕೆಲವು ಗೋಡೆಗಳ ಮೇಲೆ ಈ ಕರಪತ್ರಗಳು ಅಂಟಿಸಿದ್ದು ಕಾಣಿಸಿಕೊಂಡವು. ವಾಸುದೇವ ಅಲ್ಲಪ್ಪ ನಾಯಿಕ ಮತ್ತು ಬಸಪ್ರಭು ದುಂಡಪ್ಪ ದಲಾಲರು ಇಂತಹ ವಿಧ್ವಂಸಕ ಚಟುವಟಿಕೆಗಳ ಕರಪತ್ರಗಳನ್ನು ಬರೆದಿದ್ದರು. ಅಲ್ಲದೇ ವಿದ್ಯಾರ್ಥಿಗಳನ್ನು ಕೂಡ ಇಂತಹ ಕಾರ್ಯಗಳಲ್ಲಿ ಭಾಗವಹಿಸುವ ಹಾಗೆ ಪ್ರಯತ್ನ ಮಾಡಲಾಯಿತು. ಇಮಾಮಸಾಹೇಬ ಮುಲ್ಲಾ, ಒಂದು ಸಲ ೭ನೇ ತರಗತಿಗೆ ಪ್ರವೇಶ ಮಾಡಿ ವಿದ್ವಸಂಕ ಕಾರ್ಯಗಳಿಗೆ ಪ್ರೇರಣೆ ಮಾಡುವ ಕರಪತ್ರಗಳನ್ನು ವಿದ್ಯಾರ್ಥಿಗಳ ಸಮ್ಮುಖದಲ್ಲಿ ಓದಿದರು.

## ೩.೧೯. ಶಾಲೆಯಿಂದ ಚಳುವಳಿಯತ್ತ ಶಾಲಾ ಬಾಲಕರು :

ಶಂಕರ ಬಸವಂತಪ್ಪ ಪತ್ತಾರ ಇವರು, ಶಾಲಾ ಶಿಕ್ಷಕರ ಸಮ್ಮುಖದಲ್ಲಿ ಕರಪತ್ರಗಳನ್ನು ಓದುವ ಕೆಲಸವನ್ನು ಮಾಡಿ ಅವರನ್ನು ಚಳುವಳಿಗೆ ಪ್ರಚೋದಿಸಲು ಪ್ರಯತ್ನ ಮಾಡಿದರು. ಈ ಮೊದಲೇ ಇದ್ದ ಗಾಣಗೇ ಎಂಬ ಶಿಕ್ಷಕರ ಬದಲಿಗೆ ಬಸಪ್ರಭು ದುಂಡಪ್ಪ ದಲಾಲ ಇವರನ್ನು ಶಿಕ್ಷಕನಾಗಿ ಕೆಲಸ ಮಾಡುವಂತೆ ನೇಮಕ ಮಾಡಲಾಯಿತು. ದಲಾಲ ಅವರು, ಶಿಕ್ಷಕರಾಗಿ ನೇಮಕಗೊಂಡಾಗ ಶಾಲಾ ಸಮಯವನ್ನು ಉಪಯೋಗಿಸಿಕೊಂಡು ವಿದ್ಯಾರ್ಥಿಗಳನ್ನು ವಿಧ್ವಂಸಕ ಕರಪತ್ರಗಳನ್ನು ಓದುವುದು, ಹಾಗೂ ಬರೆಯುವ ಹಾಗೆ ಮನವೊಲಿಸುವುದು ಮತ್ತು ಈ ವಿದ್ರೋಹಾತ್ಮಕ ವಿಷಯಗಳನ್ನೊಳಗೊಂಡ ಕರಪತ್ರಗಳನ್ನು ಗೋಡೆಗಳಿಗೆ ಅಂಟಿಸುವುದು, ಈ ಎಲ್ಲಾ ಕಾರ್ಯಗಳನ್ನು ಮಾಡುವ ಹಾಗೆ ಅವರನ್ನು ಪ್ರಚೋದಿಸಿದರು. ಇದರ ಫಲಶ್ರುತಿಯಾಗಿ ೫ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಮೂರು ವಿದ್ಯಾರ್ಥಿಗಳಾದ ಉಜಳೆ ಮಹಾರ, ಮಧುಸೂದನ ಜೋಶಿ ಮತ್ತು ಭೀಮರಾವ ಕದಮ್ ಅವರ ಸಹೋದರ ಧರ್ಮು ಡೋರ, ಎಂಬುವವರು ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳುವಂತಾಯಿತು. ಶಾಲೆಗಳನ್ನು ತೊರೆದು ಚಳುವಳಿಯಲ್ಲಿ ಧುಮುಕಿದ ಶಾಲಾ ಬಾಲಕರ ದೇಶಸೇವೆ ನಿಜವಾಗಿಯೂ ಓಡಕಲ್ಲದ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲಿ ಒಂದು ಮರೆಯಲಾಗದ ಘಟನೆ. ಸಾಗರೊಪಾದಿಯಲ್ಲಿ ನಡೆದ ಅಂದಿನ ಸ್ವಾತಂತ್ರ್ಯ ಚಳುವಳಿಗೆ ಪ್ರಾಥಮಿಕ ಶಾಲೆಯ ಮುಗ್ಧ ಬಾಲಕರಿಂದ ಅಳಿಲು ಸೇವೆ ಸಲ್ಲಿಕೆಯಾದದ್ದು ನಿಜಕ್ಕೂ ಸ್ಮರಣಿಯವಾದದ್ದು.

## ೩.೨೦. ಅಥಣಿ ಪೋಸ್ಟ ಆಫೀಸ ಸುಡುವ ಮತ್ತು ಸರ್ಕಾರಿ ಟ್ರೇಜರಿ ಲೂಟಿ ಯೋಜನೆ

ದಿನ-ದಿನಕ್ಕೆ ಕ್ರಾಂತಿಯ ಕಂಪು ಕ್ರಾಂತಿಕಾರಿಗಳಲ್ಲಿ ಬೆಳೆಯುತ್ತಲೇ ಹೋಯಿತು. ಇಮಾಮಸಾಹೇಬ ಮುಲ್ಲಾ ರವರ ನೇತೃತ್ವದಲ್ಲಿನ ತಂಡ ಅಥಣಿ ಪೋಸ್ಟ ಆಫೀಸನ್ನು ಸುಡುವ ಮತ್ತು ಸರ್ಕಾರಿ ಟ್ರೇಜರಿಯನ್ನು ಲೂಟಿ ಮಾಡುವ ಬಹು ಮುಖ್ಯ ಯೋಜನೆಯನ್ನು ಹೊಂದಿತ್ತು. ಗ್ರಾಮದ ತರುಣ ಹೋರಾಟಗಾರರ ತಂಡವು ಸಂಗ್ರಾಮಕ್ಕೆ ಸನ್ನದ್ಧವಾಯಿತು. ಪ್ರಯಾಣಕ್ಕೆ ತೊಡಗುವ ಮುನ್ನ ಎಲ್ಲಾ ರೀತಿಯ ಸಲಕರಣೆಗಳನ್ನು, ಶಸ್ತ್ರಾಸ್ತ್ರಗಳನ್ನು ತಯಾರಿಸಿಕೊಂಡು ಚಳುವಳಿಗೆ ಸಜ್ಜಾಗಿ ದಂಡಯಾತ್ರೆಗೆ ನಡೆದರು. ತಂಡದ ಎಲ್ಲಾ ೯ ಜನ ಹೋರಾಟಗಾರರು ಅಥಣಿಗೆ ತೆರಳಲು ಅಣಿಯಾದಾಗ, ತಂಡದ ಜೊತೆ ಶಾಲಾ ಬಾಲಕರಾದ ಮಧುಸೂದನ ಜೋಶಿ, ಧರ್ಮು ಕದಮ, ಉಜಳೆ ಮಹಾರ ಕೂಡ ಉತ್ಸಾಹದಿಂದಲೇ ಅಥಣಿಯತ್ತ ಹೆಜ್ಜೆ ಹಾಕಿದರು.

ಸ್ವಾತಂತ್ರ್ಯ ಹೋರಾಟಗಾರರು ಮತ್ತು ಶಾಲಾ ವಿದ್ಯಾರ್ಥಿಗಳನ್ನು ಒಳಗೊಂಡ ತಂಡವು ಪ್ರಯಾಣ ಆರಂಭಿಸಿದಾಗ ಇವರ ಜೊತೆ ಹಿಡಕಲ್ಲ ಗ್ರಾಮದ ಒಂದು ವಯಸ್ಕ

ಮಹಾರ ಜನಾಂಗದ ತಂಡ ಅಥಣಿಗೆ ಹೋಗಲು ಕೂಡಿಕೊಂಡಿತು. ಬರಗಾಲದ ಬವಣೆಯಲ್ಲಿದ್ದ ಮಹಾರ ಕುಟುಂಬಗಳಿಗೆ ಜೋಳ ಮತ್ತು ಇನ್ನಿತರ ವಸ್ತುಗಳನ್ನು ಒದಗಿಸುವಂತೆ, ಅಥಣಿಯಲ್ಲಿರುವ ಮಾಮಲೇದಾರನಿಗೆ ಭೆಟ್ಟಿಯಾಗಿ ಮನವಿಯನ್ನು ಸಲ್ಲಿಸುವುದೇ ಈ ತಂಡದ ಮುಖ್ಯ ಉದ್ದೇಶವಾಗಿತ್ತು. ಹಿಡಕಲ್ಲದಿಂದ ಎರಡು ತಂಡದವರು ತಮ್ಮ ಪ್ರಯಾಣವನ್ನು ಆರಂಭಿಸಿ ನೆರೆಯ ಹಾರೂಗೇರಿ ತಲುಪಿದರು. ಹಾರೂಗೇರಿ ತಲುಪಿದಾಗ ಅಲ್ಲಿ ಬಿದ್ದ ಮಳೆಯಿಂದಾಗಿ, ಹೋರಾಟಗಾರರ ಮತ್ತು ಮನವಿದಾರ ಮಹಾರರ ತಂಡವು ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿತು. ನಂತರ ಪ್ರಯಾಣವನ್ನು ಮುಂದುವರೆಸಿ ತಂಡ ರಾತ್ರಿಯ ವೇಳೆಗೆ ದರೂರ ಗ್ರಾಮವನ್ನು ತಲುಪಿ, ಅಲ್ಲಿನ ಚಾವಡಿಯಲ್ಲಿ ವಾಸ್ತವ್ಯ ಮಾಡಿದರು. ತಂಡದ ನಾಯಕ ಇಮಾಮಸಹೇಬ ಮುಲ್ಲಾ, ಎಲ್ಲರಿಗೂ ರಾತ್ರಿ ಊಟದ ವ್ಯವಸ್ಥೆಯನ್ನು ಮಾಡಿಸಿದರು.

ಮುಂಜಾನೆ ಪಾಠಿಚೀಲದೊಂದಿಗೆ ಶಾಲೆಗೆ ಬಂದ, ಮಧುಸೂದನ ಜೋಶಿ, ಧರ್ಮು ಕದಮ, ಉಜಳೆ ಮಹಾರ ಎಂಬ ವಿದ್ಯಾರ್ಥಿಗಳು ಸಂಜೆ ಮನೆಯತ್ತ ತೆರಳದೆ, ಭಾರತಾಂಬೆಯ ಬಂಧ ವಿಮೋಚನೆಗಾಗಿ, ದೇಶ ಸೇವೆಗಾಗಿ ಹೋರಾಟಗಾರರೊಂದಿಗೆ ಅಥಣಿಯತ್ತ ಮುನ್ನಡೆದಿದ್ದರು. ದಿನವೂ ಸಾಯಂಕಾಲ ೫-೩೦ ಗಂಟೆಗೆ ಶಾಲೆ ಬಿಟ್ಟು ೬ ರಿಂದ ೬-೩೦ ಗಂಟೆಗೆ ಮಕ್ಕಳು ಮನೆಗೆ ಬರುವ ರೂಢಿ ಇತ್ತು. ಆದರೆ ಅಂದು ಮಕ್ಕಳು ೭-೩೦ ಗಂಟೆಯಾದರೂ, ಮನೆಗೆ ಬರಲಿಲ್ಲ. ಸಂಜೆ ಕಳೆದು ರಾತ್ರಿಯಾದರೂ ಶಾಲಾ ಮಕ್ಕಳು ಸುಳಿವಿಲ್ಲ. ತಂದೆ ತಾಯಿಗಳಲ್ಲಿ ಅತಂಕ ಮನೆ ಮಾಡಿತು. ಮಬ್ಬು ಗತ್ತಲಿನಲ್ಲಿಯೇ ಪಾಲಕರು ಶಾಲೆಯ ಕಡೆಗೆ ಹೋಗಿ ಹುಡುಕಾಡಿ ಬರೀಗೈಯಿಂದ ಮನೆಗೆ ಹಿಂತಿರುಗಿದರು.

ವಿದ್ಯಾರ್ಥಿ ಪಾಲಕರು ತಮ್ಮ ಮಕ್ಕಳ ಶೋಧಕ್ಕಾಗಿ ಸತತ ಪ್ರಯತ್ನಿಸಿ ವಿಫಲರಾದರು. ರಾತ್ರಿ ಸರಿ ಹೊತ್ತಿನವರೆಗೆ ವಿಚಾರಣಾ ಮತ್ತು ಶೋಧನಾ ಕಾರ್ಯ ಬಿರುಸಿನಿಂದಲೇ ನಡೆಯಿತು. ಶಾಲಾ ಬಾಲಕರು ಎಲ್ಲಿ ಹೋದರು? ಎಂಬ ಯಕ್ಷ ಪ್ರಶ್ನೆ ರಾತ್ರಿಯಿಡಿ ಗ್ರಾಮಸ್ಥರನ್ನು ಕಾಡಿತು.

ಹೋರಾಟಗಾರರೆಲ್ಲರೂ ಮರುದಿವಸ ನಸುಕಿನಲ್ಲಿಯೇ ಪ್ರಯಾಣ ಆರಂಭಿಸಿ ಮುಂಜಾನೆ ೮-೩೦ ಗಂಟೆಗೆ ಅಥಣಿಯನ್ನು ತಲುಪಿತು. ಹೋರಾಟಗಾರ ತಂಡವು ಮುಂಜಾನೆ ೯ ಗಂಟೆಗೆ, ಗೌರಿ ಶಂಕರ ಹೋಟೆಲನಲ್ಲಿ ಉಪಹಾರ ಸೇವಿಸಿದರು. ನಂತರ ತಂಡವು ಹಿಪ್ಪರಗಿ ವಕೀಲರ ಆಫೀಸನತ್ತ ಸಾಗಿ, ಅಲ್ಲಿ ಕೆಲಹೊತ್ತು ತಂಗಿದರು. ಅಲ್ಲಿರುವಾಗಲೇ, ಹಿಡಕಲ್ಲ ಗ್ರಾಮದ ಪೋಲಿಸ್ ಪಾಟೀಲರ ಮಗನಿಗೂ ಮತ್ತು ಬಸಪ್ರಭು ದುಂಡಪ್ಪ ದಲಾಲ ಇವರಿರ್ವರ ಮಧ್ಯೆದಲ್ಲಿ ಚಳುವಳಿಯ ಕುರಿತು ಜಗಳವೇರ್ಪಟ್ಟಿತು. ಆವಾಗ ವಕೀಲರ ಕಾರಕೂನನು ಎಲ್ಲ ಹೋರಾಟಗಾರರನ್ನು ತಮ್ಮ ಆಫೀಸಿನಿಂದ ಹೊರಗೆ ಅಟ್ಟಿದನು.

ಅಕ್ಟೋಬರ ೧ ರಂದು ಅಥಣಿಯಲ್ಲಿ ಹೋರಾಟಗಾರರಿಗೆ ಕಛೇರಿ ಸುಡಲು ಚಿಮಣಿ ಎಣ್ಣೆ ಸಿಗದ್ದರಿಂದ ನಿರಾಶೆಗೊಂಡರು. ಹೀಗಾಗಿ ಚಳುವಳಿಕಾರರ ತಂಡವು ಸಾವಳಿಗೆ ಗ್ರಾಮಕ್ಕೆ ತೆರಳಲು ಯೋಚಿಸಿತು.

ಶಾಲಾಬಾಲಕ ಮಧುಸೂದನ ಜೋಶಿಯ ಸಂಬಂಧಿಕರಾದ ಹಾರೂಗೇರಿಯ ಹಣಮಂತ ಕುಲಕರ್ಣಿಯವರು ಯಾವುದೋ ಕಾರ್ಯದ ನಿಮಿತ್ಯ ಅಂದು ಅಥಣಿಗೆ ಬಂದಿದ್ದರು. ಅಲ್ಲಿ ಮಧುಸೂದನ ಜೋಶಿಯನ್ನು ಕಂಡು ವಿಚಾರಿಸಿದರು. ಮನೆಯವರಿಲ್ಲದೇ ಒಬ್ಬನೇ ಗುಂಪಿನಲ್ಲಿರುವುದು ಅನುಮಾನಕ್ಕೆ ಎಡೆಮಾಡಿತು. ಸಂಶಯ ನಿವಾರಣೆಗಾಗಿ ಆತನನ್ನು ಪ್ರಶ್ನಿಸಿದರು. ತಡವರಿಸುತ್ತ ಮಾತನಾಡಿದ ಮಧುಸೂದನನ ಬಗ್ಗೆ ಹಣಮಂತರು ಸಂಶಯಗೊಂಡರು. ಅವನನ್ನು ಗುಂಪಿನಿಂದ ಬೇರ್ಪಡಿಸಿ ಸ್ವಲ್ಪ ದೂರ ಕರೆದುಕೊಂಡು ಬಂದು, ಸ್ವಲ್ಪ ಜೋರಾಗಿಯೇ ಪ್ರಶ್ನಿಸಿದರು. ಬಾಲಕ ಸ್ವಾತಂತ್ರ್ಯ ಚಳುವಳಿಕಾರರ ಜೊತೆಗೂಡಿ ಚಳುವಳಿಯಲ್ಲಿ ಭಾಗವಹಿಸುವುದಕ್ಕಾಗಿ ಅಥಣಿಗೆ ಬಂದಿರುವ ನಿಜಸ್ಥಿತಿಯನ್ನು ಹೇಳಿದ.

ಹಣಮಂತ ಕುಲಕರ್ಣಿಯವರು ಚಳುವಳಿನಿರತ ತಂಡದವರಿಗೆ ಹೇಳಿ ಮಧುಸೂದನ ಜೋಶಿಯನ್ನು ತನ್ನ ಜೊತೆ ಊರಿಗೆ ಕರೆದುಕೊಂಡು ಬಂದು ಆತನನ್ನು ಮನೆಗೆ ತಲುಪಿಸಿದರು. ಕಾಣೆಯಾದ ಶಾಲಾ ಬಾಲಕರಲ್ಲಿ ಒಬ್ಬನಾದ ಮಧುಸೂದನ ಜೋಶಿ ಗ್ರಾಮಕ್ಕೆ ಬಂದ ಸುದ್ದಿ ಬೇಗನೇ ಎಲ್ಲೆಡೆಯೂ ಹರಡಿತು. ಮಕ್ಕಳನ್ನು ಕಾಣದೆ ಕಂಗಾಲಾಗಿದ್ದ, ಪಾಲಕರು ಧಾವಂತದಿಂದ ಬಂದು ಮಧುಸೂದನ ಜೋಶಿಯನ್ನು ವಿಚಾರಿಸಿದಾಗ, ಶಾಲಾ ಬಾಲಕರು ಚಳುವಳಿಕಾರರ ಜೋತೆ ಅಥಣಿಯಲ್ಲಿರುವ ವಿಚಾರ ತಿಳಿಯಿತು. ಚಳುವಳಿಕಾರರು ಮರುದಿವಸ ಸಾವಳಗಿಗೆ ಹೋಗುವ ವಿಚಾರ ಹೊಂದಿರುವುದನ್ನು ಬಾಲಕ ತಿಳಿಸಿದ. ಚಳುವಳಿಯಲ್ಲಿ ಬಾಗಿಯಾದ ಶಾಲಾ ಬಾಲಕರನ್ನು ಹಿಂದಕ್ಕೆ ಕರೆತರಲು ಗ್ರಾಮದಿಂದ ಭೀಮರಾವನ ಕದಮರ ಸಹೋದರ ರಾಣು ಕದಮ, ಉಜಳೆ ಮಹಾರನ ತಂದೆ ವಿಟು ಮಹಾರ, ಶಂಕರ ಪತ್ತಾರನ ಚಿಕ್ಕಪ್ಪನಾದ ರಾಮಚಂದ್ರ ಪತ್ತಾರ ಸಾವಳಗಿಗೆ ಪ್ರಯಾಣ ಬೆಳೆಸಿದರು.

ಇತ್ತ ಹೋರಾಟಗಾರರ ತಂಡವು ಅದೇ ದಿನ ಅಂದರೆ ೧೯೪೨ರ ಅಕ್ಟೋಬರ ೧ರಂದು, ಜಮಖಂಡಿ ಸಂಸ್ಥಾನದ ಸಾವಳಗಿ ಗ್ರಾಮಕ್ಕೆ ಪ್ರಯಾಣ ಬೆಳೆಸಿತು. ಸಾವಳಗಿ ಗ್ರಾಮಕ್ಕೆ ಮುಟ್ಟಿದ ಹೋರಾಟಗಾರರು, ಅಂದು ಬೆಳಗಲಿ ಸಹೋದರರ ಹಿಟ್ಟಿನ ಗಿರಣಿಯಲ್ಲಿ ಠಿಕಾಣಿ ಹೂಡಿದರು. ಮರುದಿವಸ ಬೆಳಗಲಿಯವರ ಸಂಬಂಧಿಕನಾದ ಸುರೇಂದ್ರ ಎನ್ನುವವರ ತೋಟದ ಮನೆಯಲ್ಲಿ ವಾಸ್ತವ್ಯ ಮಾಡಿದರು.

## ೩.೨೧. ಸಾವಳಗಿಯಲ್ಲಿ ಮಹಾತ್ಮ ಗಾಂಧೀ ಜಯಂತಿ ಆಚರಣೆ :

ಮರುದಿವಸ ಚಳುವಳಿಕಾರರು ಮತ್ತು ಶಾಲಾ ಬಾಲಕರು, ಸಾವಳಗಿ ಗ್ರಾಮದಲ್ಲಿ "ಅಕ್ಟೋಬರ ೨ರಂದು ಸಾರ್ವಜನಿಕರ ಜೊತೆಗೂಡಿ ಪೋಲಿಸ ಠಾಣೆಯ ಮುಂದೆ ಮಹಾತ್ಮ ಗಾಂಧಿಜೀಯವರ ಜಯಂತಿಯನ್ನು ಅದ್ದೂರಿಯಿಂದ ಮಾಡಿದರು. ತಂಡವು ಠಾಣೆಯಲ್ಲಿದ್ದ ಇಟಾಲಿಯನ್ ಗನ್ ವಶಪಡಿಸಿಕೊಂಡಿತು". [೨೪] ಎಲ್ಲರ ಜೊತೆಗೂಡಿ ಮುಂಜಾನೆ ಗ್ರಾಮದಲ್ಲಿ ಪ್ರಭಾತಪೇರಿ ಮಾಡಿ ಧ್ವಜವಂದನೆ ಕಾರ್ಯಕ್ರಮವನ್ನು ಮಾಡಿದರು. ಚಳುವಳಿಕಾರರು ಸಂಜೆಯ ಹೊತ್ತು ಸಾರ್ವಜನಿಕರೊಂದಿಗೆ ಕೂಡಿಕೊಂಡು ಗ್ರಾಮದ ಬೀದಿ-ಬೀದಿಗಳಲ್ಲಿ ಪ್ರಭಾತಪೇರಿ ಮೆರವಣಿಗೆಗಳನ್ನು ಮಾಡಿದರು. ಅದೇ ದಿನ ರಾತ್ರಿ ಅನಂತ ಶಾಮರಾವ ಕುಲಕರ್ಣಿಯವರು ತಮ್ಮ ಸಂಗಡಿಗನ್ನೊಬ್ಬನೊಂದಿಗೆ ಸಾವಳಗಿ ಗ್ರಾಮಕ್ಕೆ ಬಂದು, ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರನ್ನು ಭೆಟ್ಟಿಯಾದರು. ಅಲ್ಲದೇ ವಿಧ್ವಂಸಕ ಕಾರ್ಯಕ್ರಮದ ಯೋಜನೆಯಂತೆ, ತಂಡದ ಎಲ್ಲಾ ಸದಸ್ಯರಿಗೂ ಮಂಗಸೂಳಿ ಗ್ರಾಮಕ್ಕೆ ಬರಲು ಮತ್ತು ಮುಂದಿನ ಕಾರ್ಯ ಯೋಜನೆಗಳನ್ನು ಕೈ ಕೊಳ್ಳಲು ಸೂಚನೆಯನ್ನು ನೀಡಿದರು.

ಅಕ್ಟೋಬರ ೨ರ ಸಾಯಂಕಾಲದ ವೇಳೆಗೆ, ಸಾವಳಗಿ ತಲುಪಿದ ಶಾಲಾ ವಿಧ್ಯಾರ್ಥಿಗಳ ಪಾಲಕರು, ತಮ್ಮ ಮಕ್ಕಳನ್ನು ಕಂಡು ಸಮಾಧಾನಗೊಂಡರು. ರಾಣು ಕದಮ (ಡೋರ), ಕಿರಿಯ ಸಹೋದರನಾದ ಧರ್ಮು ಡೋರ, ಇವನನ್ನು ಚಳುವಳಿಯಿಂದ ಹಿಂದಕ್ಕೆ ಕರೆತರುವಲ್ಲಿ ಯಶಸ್ವಿಯಾದ. ಆದರೆ ಇನ್ನೊಬ್ಬ ಸಹೋದರ ಭೀಮರಾವ ಕದಮ ಚಳುವಳಿಕಾರರಿಂದ ಬೇರ್ಪಟ್ಟು ಹಿಂದಕ್ಕೆ ಬರಲು ಒಪ್ಪಲಿಲ್ಲ. ಶಂಕರ ಬಸವಂತಪ್ಪ ಪತ್ತಾರರ ಚಿಕ್ಕಪ್ಪನಾದ ರಾಮಚಂದ್ರ ಪತ್ತಾರರವರು, ಚಳುವಳಿಯಿಂದ ಶಂಕರ ಪತ್ತಾರರನ್ನು ಹಿಂದಕ್ಕೆ ಕರೆದುಕೊಂಡು ಹೋಗಲು ಪ್ರಯತ್ನಿಸಿದರು. ಆದರೆ, ಆಗಲೇ ಅವರಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಕಿಚ್ಚು ಬಲಗೊಂಡಿತ್ತು. ಹೀಗಾಗಿ ಎಷ್ಟೇ ಪ್ರಯತ್ನಿಸಿದರು, ಶಂಕರರು ಚಳುವಳಿಯಿಂದ ಹಿಂದೆ ಸರಿಯಲಿಲ್ಲ. ಚಿಕ್ಕಪ್ಪನು ಬಂದ ದಾರಿಗೆ ಸುಂಕವಿಲ್ಲದಂತೆ, ಬರಿಗೈಯಲ್ಲಿ ಊರಿನೆಡೆಗೆ ಮರಳಿದರು. ವಿಟು ಮಹಾರ ಮಗನಾದ ಉಜಳೆ ಮಹಾರನನ್ನು ಗ್ರಾಮಕ್ಕೆ ಕರೆತರಲು ಯಶಸ್ವಿಯಾದರು. ಕಳೆದು ಹೋದ ಶಾಲಾ ಬಾಲಕರು ಸುರಕ್ಷಿತವಾಗಿ ಮನೆ ತಲುಪಿದ್ದು ಪಾಲಕರಿಗೆ ಹಿಡಿಸಲಾರದ ಸಂತೋಷವನ್ನುಂಟು ಮಾಡಿತು.

## ೩.೨೨. ಅಥಣಿಯತ್ತ ಚಳುವಳಗಾರರ ಪ್ರಯಾಣ :

ಹಿಡಕಲ್ಲದ ೯ ಜನ ಹೋರಾಟಗಾರರ ಜೊತೆ, ಸಾವಳಗಿಯ ೪ ಜನ ಹೋರಾಟಗಾರರು ಮತ್ತು ಬನಹಟ್ಟಿಯ ಒಬ್ಬ ಹೋರಾಟಗಾರನು ಕೂಡಿಕೊಂಡು ಒಟ್ಟು

ಎಲ್ಲಾ ೧೪ ಜನ ಹೋರಾಟಗಾರರು, ಮರುದಿವಸ ಮುಂಜಾನೆ ಎರಡು ಎತ್ತಿನ ಗಾಡಿಗಳ ಮೂಲಕ ಸಾವಳಗಿ ಗ್ರಾಮವನ್ನು ಬಿಟ್ಟು, ಅಥಣಿ ಕಡೆಗೆ ನಡೆದರು. ಅಥಣಿಗೆ ಬರುವ ಮಾರ್ಗ ಮಧ್ಯದಲ್ಲಿ ಹೋರಾಟಗಾರರ ಪಡೆಯು, ಕೊಕಟನೂರ ಚಾವಡಿಗೆ ಕಲ್ಲುಗಳನ್ನು ಎಸೆದರು. ಅಲ್ಲದೇ ಕೊಕಟನೂರ ಗ್ರಾಮದ ಚಾವಡಿಗೆ, ತಂಡದಲ್ಲಿದ್ದ ಬಸವಪ್ರಭು ಟೊಂಣಿ (ದಲಾಲ) ಯವರು ಸರ್ಕಾರದ ವಿರುದ್ದ ಬರೆಯಲ್ಪಟ್ಟ ಕರಪತ್ರವೊಂದನ್ನು ಅಂಟಿಸಿ ಬಂದರು. ಜೊತೆಗೆ ಕೊಕಟನೂರ ಗ್ರಾಮದ ಪೊಲೀಸ ಪಾಟೀಲನ ಮಗ ಕಾಟಗೌಡರನಿಗೆ, ಒಂದು ಕೈ ಬರಹದ ಕರಪತ್ರವನ್ನು ಕೊಟ್ಟನು. ಆ ಕರಪತ್ರವು ವಿದ್ಯಾರ್ಥಿಗಳಿಗೆ ವಿದ್ರೋಹಾತ್ಮಕ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಪ್ರೇರೆಪಿಸುವ ಅಂಶಗಳನ್ನ ಒಳಗೊಂಡಿತ್ತು.

ಪೊಲೀಸ ಪಾಟೀಲನ ಮಗನು ಚಳುವಳಿಕಾರರಿಂದ ಪಡೆದುಕೊಂಡ ಕರಪತ್ರವನ್ನು ತನ್ನ ತಂದೆಗೆ ಕೊಟ್ಟನು. ನಂತರ ಪೊಲೀಸ ಪಾಟೀಲರು ಮಗನಿಂದ ಪಡೆದ ಆ ಕರಪತ್ರವನ್ನು ತೆಗೆದು ಕೊಂಡು ಅಥಣಿಯತ್ತ ನಡೆದರು. ಕೊಕಟನೂರ ಪೊಲೀಸ ಪಾಟೀಲರು ಕುದುರೆಯ ಮೇಲೆ ಕುಳಿತು ಅಥಣಿಗೆ ಹೋಗುವ ಹಾದಿಯಲ್ಲಿ, ಕೊಕಟನೂರ ಗ್ರಾಮದ ಆಸು-ಪಾಸಿನಲ್ಲಿಯೇ ಈ ೧೪ ಜನರಿಂದ ಕೂಡಿದ ಗುಂಪನ್ನು ಎದುರಿಸಿದರು. ಮತ್ತು ತನ್ನ ಮಗನಿಗೆ ಈ ಕರಪತ್ರವನ್ನು ಯಾರು ಕೊಟ್ಟರೆಂಬುದನ್ನು ವಿಚಾರಿಸಿದರು. ತಂಡದವರಿಂದ ಸ್ಪಷ್ಟವಾದ ಉತ್ತರ ಪೊಲೀಸ ಪಾಟೀಲರಿಗೆ ಸಿಗಲಿಲ್ಲ.

ಚಳುವಳಿಕಾರರ ಕರಪತ್ರವನ್ನು ಪೊಲೀಸ ಪಾಟೀಲರು ಅಥಣಿ ಠಾಣೆಯ ಪೊಲೀಸ ಸಬ್‌ಇನಸ್ಪೆಕ್ಟರನಿಗೆ ಕೊಟ್ಟರು. ನಂತರ ಸಬ್‌ಇನಸ್ಪೆಕ್ಟರನು ಸಶಸ್ತ್ರ ಪೋಲಿಸರನ್ನು ಮತ್ತು ಅಬಕಾರಿ ಪೋಲಿಸರನ್ನು ಕರೆದುಕೊಂಡು ಸಾವಳಗಿಯಿಂದ ಅಥಣಿಯತ್ತ ಬರುತ್ತಿರುವ ಈ ೧೪ ಜನರನ್ನು ದಸ್ತಗಿರಿ ಮಾಡುವ ಸಲುವಾಗಿ ಠಾಣೆಯಿಂದ ಹೊರನಡೆದನು.

ಈ ಮಧ್ಯೆ ವೇಳೆಯಲ್ಲಿ ಈ ಎಲ್ಲಾ ೧೪ ಜನರು ಚಕ್ಕಡಿ ಗಾಡಿಗಳಿಂದ ಅಥಣಿ ಪಟ್ಟಣದ ಹೊರವಲಯದಲ್ಲಿಯೇ ಇಳಿದು, ಗಾಡಿಗಳನ್ನು ಹಿಂತಿರುಗಿಸಿ ಗ್ರಾಮಕ್ಕೆ ಕಳುಹಿಸಿದರು. ಮತ್ತು ಇವರೆಲ್ಲರೂ ನಡೆದು ಕೊಂಡೇ ಮೋಟರ ಬಸ್ ಸ್ಟ್ಯಾಂಡಿಗೆ ಬಂದು ತಲುಪಿದರು. ಇವರೆಲ್ಲರೂ ಮಧ್ಯಾಹ್ನ ೨ ಗಂಟೆಗೆ ಮಂಗಸೂಳಿ ಮಾರ್ಗವಾಗಿ ಶೇಡಬಾಳಕ್ಕೆ ತೆರಳುವ ಮೋಟರ ಬಸ್‌ನಲ್ಲಿ ಮಂಗಸೂಳಿಗೆ ಹೋಗುವ ವಿಚಾರವನ್ನು ಹೊಂದಿದ್ದರು.

**೩.೨೩. ಸ್ವಾತಂತ್ರ್ಯ ಸೇನಾನಿಗಳ ಬಂಧನ :**

ಪೋಲಿಸ ಇನಸ್ಪೇಕ್ಟರರು ಆರಂಭದಲ್ಲಿ ಅಥಣಿಯ ಟೋಲನಾಕಾ ಹತ್ತಿರದಲ್ಲಿದ್ದ ಈ ೧೪ ಜನರನ್ನು ಗುರುತಿಸುವುದರಲ್ಲಿ ಅಯಶಸ್ವಿಯಾದರು. ನಂತರ ಅವರು

ಕೊಕಟನೂರ ರೋಡದ ಗುಂಟ ಸ್ವಲ್ಪ ದೂರದವರೆಗೆ ಸಾಗಿ, ಚಳುವಳಿಕಾರರರು ದೊರೆಯದ ಕಾರಣ ಮತ್ತೇ ಚಳುವಳಿಕಾರರ ತಂಡವನ್ನು ಶೋಧಿಸುತ್ತ ಮೋಟರ ಸ್ಟ್ಯಾಂಡಿಗೆ ಬಂದರು. ಅಲ್ಲಿ ೧೪ ಜನ ಹೋರಾಟಗಾರರು ಎರಡು ಗುಂಪುಗಳಲ್ಲಿ ಮೋಟರ ಸ್ಟ್ಯಾಂಡಿನಲ್ಲಿ ಕುಳಿತಿರುವುದನ್ನು ಕಂಡು ಸಂಶಯಾತ್ಮಕವಾಗಿ ಇವರನ್ನು ಬಂಧಿಸಿದರು.

ಹೋರಾಟಗಾರರಲ್ಲಿಯ ನಿಂಗಪ್ಪ ಪಾಯಪ್ಪ ಆ್ಯಂಟಿನ ಸಾ/ ಬನಹಟ್ಟಿ ಎಂಬವರು ಪೊಲೀಸರ ಬಂಧನದಿಂದ ತಪ್ಪಿಸಿಕೊಂಡು ಓಡಿ ಹೋಗಲು ಪ್ರಯತ್ನಸಿದನು. ಆದರೆ ರಸ್ತೆ ರಿಪೇರಿಯಲ್ಲಿ ತೊಡಗಿದ್ದ, ಕೂಲಿಯಾದ ಅಪ್ಪಯ್ಯನ ಸಹಾಯದಿಂದ ತತ್‌ಕ್ಷಣವೇ ಈತನನ್ನು ಪೊಲೀಸರು ಬಂಧಿಸಿದರು. ಈ ಹೋರಾಟದಲ್ಲಿ ನಿಂಗಪ್ಪ ಪಾಯಪ್ಪ ಆ್ಯಂಟಿನ, ತನ್ನ ಕೈಚೀಲದಲ್ಲಿರುವ ಪಿಸ್ತೂಲಿನ ಹಿಂಬದಿಯಿಂದ ತನ್ನನ್ನು ಹಿಡಿಯಲು ಬಂದ ಅಪ್ಪಯ್ಯನ ಮುಖದ ಮೇಲೆ ಹೊಡೆಯಲಾಗಿ, ಹೊಡೆತವು ಮೂಗಿನ ಮೇಲೆ ಬಿದ್ದು ಗಾಯಗೊಂಡನು. ಕ್ಷಣದಲ್ಲಿಯೇ ಪೊಲೀಸರು ಆತನ ಸುತ್ತು ವರೆದು ಆತನನ್ನು ಬಂಧಿಸಿದರು. ಒಟ್ಟು ಎಲ್ಲಾ ೧೪ ಜನ ಹೋರಾಟಗಾರರನ್ನು ಬಂಧಿಸುವಲ್ಲಿ ಪೊಲೀಸರು ಯಶಸ್ವಿಯಾದರು. ಹೋರಾಟಗಾರರು ಪ್ರಯಾಣ ಮಾಡಬಯಸಿದ್ದ ಅದೇ ಮೋಟರ ಬಸ್‌ನಲ್ಲಿ ಅವರೆಲ್ಲರನ್ನೂ ಲಗೇಜ ಸಹಿತವಾಗಿ ಬಂಧಿಸಿ ಪೊಲೀಸ್ ಸ್ಟೇಶನ್‌ಗೆ ಕರೆತರಲಾಯಿತು.

ಅಥಣಿಯ ಬಸ್ ಸ್ಟಾಂಡಿನಲ್ಲಿ ಪೊಲೀಸರಿಂದ ಬಂಧನಕ್ಕೊಳಗಾಗಿ ನ್ಯಾಯಾಲಯದಲ್ಲಿ ನ್ಯಾಯವಿಚಾರಣೆಯನ್ನು ಎದುರಿಸಿದ ಒಟ್ಟು ೧೪ ಜನ ಆಪಾದಿತರ ಸಂಖ್ಯೆ ಮತ್ತು ಹೆಸರುಗಳು ಇಂತಿವೆ.

೧) ಇಮಾಮಸಾಹೇಬ ಹುಸೇನಸಾಬ ಮುಲ್ಲಾ ಸಾ/ ಹಿಡಕಲ್ಲ
೨) ನಿಂಗಪ್ಪ ಪಾಯಪ್ಪ ಆ್ಯಂಟಿನ ಸಾ/ ಬನಹಟ್ಟಿ
೩) ಲಕ್ಷ್ಮಣ ಅಣ್ಣಪ್ಪ ಡಾಂಗೆ ಸಾ/ ಹಿಡಕಲ್ಲ
೪) ಮೌಲಾಲಿ ಹುಸೇನಸಾಬ ಮುಲ್ಲಾ ಸಾ/ ಹಿಡಕಲ್ಲ
೫) ವಾಸುದೇವ ಅಲ್ಲಪ್ಪ ನಾಯಿಕ ಸಾ/ ಹಿಡಕಲ್ಲ
೬) ಭೀಮಾ ಮಾಯಪ್ಪ ಕದಮ ಸಾ/ ಹಿಡಕಲ್ಲ
೭) ಮಲ್ಲಪ್ಪ ಪರಪ್ಪ ಕೊಕಟನೂರ ಸಾ/ ಹಿಡಕಲ್ಲ
೮) ಬಸಪ್ರಭು ದುಂಡಪ್ಪ ದಲಾಲ ಸಾ/ ಹಿಡಕಲ್ಲ
೯) ಶಂಕರ ಬಸವಂತಪ್ಪ ಪತ್ತಾರ ಸಾ/ ಹಿಡಕಲ್ಲ
೧೦) ಮಹಮ್ಮದ ಹೈದರ ಮೊಘಲ ಸಾ/ ಸಾವಳಗಿ
೧೧) ಶಂಕ್ರೆಪ್ಪ ಸಿದ್ದಲಿಂಗಪ್ಪ ನಾವಿ ಸಾ/ ಸಾವಳಗಿ
೧೨) ಕೃಷ್ಣಾ ಬಾಲು ಚವ್ಹಾಣ ಸಾ/ ಸಾವಳಗಿ
೧೩) ಬಸಗೌಡ ರಾಮಗೌಡ ನ್ಯಾಮಗೌಡರ ಸಾ/ ಸಾವಳಗಿ
೧೪) ಮಧ್ವರಾಜ ಬಾಳಕೃಷ್ಣ ದೇಶಪಾಂಡೆ ಸಾ/ ಹಿಡಕಲ್ಲ

ಹಿಡಕಲ್ಲದ ಸ್ವಾತಂತ್ರ್ಯ ಯೋಧರು ಅಥಣಿಗೆ ಬರುವ ಮಾರ್ಗ ಮಧ್ಯದಲ್ಲಿ ವಿಶ್ರಾಂತಿಗಾಗಿ, ಭಾಗವಾನ್ ತೋಟದ ಹತ್ತಿರವಿದ್ದಾಗ ೪೨ ಜನ ಪೋಲಿಸರು, ೬೦ ಜನ ಹೋಮಗಾರ್ಡರು ಮುತ್ತಿಗೆ ಹಾಕಿ ಇವರನ್ನು ಬಂಧಿಸಿದರೆಂದು, ಡಾ॥ ಸರೋಜಿನಿ ಚವಲಾರ ರವರು "ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು" ಎಂಬ ಪುಸ್ತಕದಲ್ಲಿ, (ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ-ಪುಟ vii. ರಲ್ಲಿ) ಉಲ್ಲೇಖಿಸಿದ್ದಾರೆ. ಆದರೆ ಚಳುವಳಿಕಾರರ ಮೇಲೆ ದಾಖಲಾದ ಬೆಳಗಾವಿ ಡಿವಿಜನ್ ಸೆಷನ್ ನ್ಯಾಯಾಲಯದಲ್ಲಿ ನಡೆದ ವಿಚಾರಣೆ ಸ್ಪೇಷಲ್ ಕೇಸ್ ನಂ ೧/೧೯೪೩ರ ನ್ಯಾಯ ವಿಚಾರಣೆಯ ಪ್ರಕಾರ, ಹೋರಾಟಗಾರರು ಎರಡು ಗುಂಪುಗಳಲ್ಲಿ ಅಥಣಿಯ ಮೋಟರ ಸ್ಟ್ಯಾಂಡಿನಲ್ಲಿ ಕುಳಿತಿರುವಾಗ ಇವರನ್ನು ಬಂಧಿಸಿಲಾಯಿತೆಂದು, ಹೇಳಲಾಗಿದೆ.

ಚಳುವಳಿಕಾರರ ಬಂಧನದಿಂದಾಗಿ, ಪೋಸ್ಟ್ ಆಫೀಸನ್ನು ಸುಡುವ ಮತ್ತು ಸರ್ಕಾರಿ ಖಜಾನೆಯನ್ನು ಲೂಟಿ ಮಾಡುವ ಯೋಜನೆ ಯಶಸ್ವಿಯಾಗಲಿಲ್ಲ. ಪೋಲಿಸ್ ಸ್ಟೇಶನದಲ್ಲಿ ಪಂಚರ ಸಮಕ್ಷಮದಲ್ಲಿ ಈ ಎಲ್ಲಾ ಆಪಾದಿತರ ಲಗೇಜಗಳನ್ನು ಶೋಧಿಸಿ ಪಂಚನಾಮೆಯನ್ನು ಬರೆಯಿಸಲಾಯಿತು. ಪಂಚನಾಮೆಯ ಪರಿಶೀಲನೆಯಲ್ಲಿ ಅದೆಷ್ಟೋ ವಿಧ್ವಂಸಕ ವಸ್ತುಗಳು ಹೋರಾಟಗಾರರಲ್ಲಿ ಇರುವುದು ಕಂಡು ಬಂದವು.

**೩.೨೪. ಯೋಧರಲ್ಲಿ ದೊರೆತ ಶಸ್ತ್ರಾಸ್ತ್ರಗಳು :**

"ಆಪಾದಿತ ನಂಬರ ೧, ಇಮಾಮಸಾಹೇಬ ಹುಸೇನಸಾಬ ಮುಲ್ಲಾ, ಸಾ/ ಹಿಡಕಲ್ಲ. ಇವರ ಕೈಚೀಲದಲ್ಲಿ, ಒಂದು ದೇಶಿಯ ಪಿಸ್ತೂಲ, ಎರಡು ದೊಡ್ಡ ಪ್ರಮಾಣದ ಚಾಕುಗಳು, ಜಂಬೇ ತರಹದ ಒಂದು ದೊಡ್ಡ ಕರಗಸ, ಒಂದು ಹೊಸದಾದ ಕಪ್ಪು ಬಣ್ಣದ ಅರ್ಧ ತೋಳಿನ ಅಂಗಿ, ಎರಡು ನೀಲಿ ಬಣ್ಣದ ಶರ್ಟಗಳು ಮತ್ತು ಎರಡು ಕಡು ಕಪ್ಪು ನೀಲಿ ಬಣ್ಣದ ಅಂಗಿಗಳು, ಪೋಲಿಸ್‌ರಿಗೆ ದೊರೆತವು. ಮತ್ತು ಅವನ ಕೋಟಿನ ಜೇಬುಗಳಲ್ಲಿ ಎರಡು ಜೀವಂತ ಸಿಡಿಮದ್ದುಗಳು, ಒಂದು ಸ್ಕ್ರೂ ಡ್ರೈವರ, ೧೩ ಪುಟಗಳಲ್ಲಿರುವ ಕೈ ಬರಹದ ಕರಪತ್ರಗಳು ಮತ್ತು ವಿದ್ರೋಹಾತ್ಮಕ ಕಾರ್ಯಗಳಿಗೆ ಮಾಡಿದ ಖರ್ಚು-ವೆಚ್ಚಗಳ ಒಂದು ಕಾಗದ ಪತ್ರ ದೊರೆತವು.

ಆಪಾದಿತ ನಂಬರ ೨, ನಿಂಗಪ್ಪ ಪಾಯಪ್ಪ ಟ್ಯಾಂಟಿನ, ಸಾ/ ಬನಹಟ್ಟಿ, (ಜಮಖಂಡಿ ಸಂಸ್ಥಾನ). ಇವರ ಕೈಚೀಲದಲ್ಲಿ, ಎರಡು ದೇಶಿಯ ಪಿಸ್ತೂಲಗಳು, ಒಂದು ತುದಿಗೆ ಚಿಂದಿ ಬಟ್ಟೆಗಳನ್ನು ಸುತ್ತಿದ್ದ, ಬಿದರಿನ ಹಿಡಿಕೆಯುಳ್ಳ ಎರಡು ತಗಡಿನ ಜಿಕಳಿಗಳು, ಗಂಡು ಕುದುರೆಗಳಿಗೆ ಹೊಡೆಯುವ ಎರಡು ಚಾವಟಿಗಳು, ಒಂದು ಕಟ್ಟಿಗೆಯ ಪಟ್ಟಿ, ಎರಡು ಮುಖವಾಡಗಳು, ತಲೆಗೆ ಕಟ್ಟಿಕೊಳ್ಳುವ/ ಸುತ್ತಿಕೊಳ್ಳುವ ಒಂದು ಕಪ್ಪು ಬಟ್ಟೆ ದೊರೆತವು. ಅವನ ಮೈಮೇಲಿರುವ ಅಂಗಿಯ ಜೇಬುಗಳಲ್ಲಿ ೯ ಲೋಡ್ ಮಾಡಿದ ಸಿಡಿಮದ್ದುಗಳು,

ಒಂದು ಖಾಲಿ ಸಿಡಿಮದ್ದು ಮತ್ತು ನಿಂಗಪ್ಪ ಕೊಕಟನೂರ ಇವನನ್ನು ಉದ್ದೇಶವಾಗಿಟ್ಟು ಕೊಂಡು ಬರೆದ ಒಂದು ಪತ್ರ ದೊರೆತವು.

ಆಪಾದಿತ ನಂಬರ ೭, ಲಕ್ಷ್ಮಣ ಅಣ್ಣಪ್ಪ ಡಾಂಗೆ, ಸಾ/ ಹಿಡಕಲ್ಲ, ಇವರ ಬಟ್ಟೆ ಕೈಚೀಲದಲ್ಲಿ ಕಬ್ಬಿಣವನ್ನು ಕೊರೆಯುವಂತ ಎರಡು ಕರಗಸಗಳು ಮತ್ತು ಅದಕ್ಕೆ ಸಹಾಯಕವಾಗುವ ಇನ್ನೆರಡು ಸ್ಪೇಯರ್ ಬ್ಲೇಡಗಳು, ಒಂದು ಕೈಬಾಚಿ, ಒಂದು ತುದಿಗೆ ಚಿಂದಿ ಬಟ್ಟೆಯಿಂದ ಸುತ್ತಲ್ಪಟ್ಟ ಬಿದರಿನ ಹಿಡಿಕೆಯುಳ್ಳ ೬ ತಗಡಿನ ಜಕಳಿಗಳು, ವಿದ್ರೋಹಾತ್ಮಕ ವಿಷಯಗಳನ್ನೊಳಗೊಂಡ ಒಂದು ಕರಪತ್ರ ದೊರೆತವು.

ಆಪಾದಿತ ನಂಬರ ೮ ಮೌಲಾಲಿ ಹುಸೇನಸಾಬ ಮುಲ್ಲಾ, ಸಾ/ ಹಿಡಕಲ್ಲ. ಇವನ ಕೈಚೀಲದಲ್ಲಿ, ಕಟ್ಟಿಗೆಯ ಹಿಡಿಕೆಯುಳ್ಳ ಒಂದು ದೇಶಿಯ ಜಂಬೇ, ಹೊಸದಾದ ನೀಲಿ ಬಣ್ಣದ ಎರಡು ಚಡ್ಡಿಗಳು, ನೀಲಿ ಮತ್ತು ಕಪ್ಪು ಬಣ್ಣದ ಎರಡು ಅರ್ಧ ಚಡ್ಡಿಗಳು, ಒಂದು ತೊಗಲಿನ ಕವಣೆಗಳು, ದೊರೆತವು.

ಆಪಾದಿತ ನಂಬರ ೯ ವಾಸುದೇವ ಅಲ್ಲಪ್ಪ ನಾಯಿಕ, ಸಾ/ ಹಿಡಕಲ್ಲ, ಇವನ ಕೈಚೀಲದಲ್ಲಿ, ಒಂದು ಲೋಡ್ ಮಾಡಿದ ಸಿಡಿಮದ್ದು, ಸಾಯಿಕ್ಲೋಸ್ಟಾಯಿಲ್ ಮಾಡಲ್ಪಟ್ಟ ಸ್ವತಂತ್ರ ಭಾರತದ ಶೀರ್ಷಿಕೆಯುಳ್ಳ ಒಂದು ಕರಪತ್ರ ಮತ್ತು ರಾಷ್ಟ್ರೀಯ ಗೀತೆಗಳನ್ನುಳ್ಳ ಇನ್ನೊಂದು ಕಾಗದಗಳು ದೊರೆತವು."[೨೯]

ಆಪಾದಿತ ನಂಬರ ೧೦ ಮಹಮ್ಮದ ಹೈದರ ಮೊಘಲ, ಸಾ/ ಸಾವಳಗಿ, ಇವನ ಗಂಟಿನಲ್ಲಿ ಸೀಲ್ ಮಾಡಿದ ನಾಲ್ಕು ಸ್ಪಿರೀಟ ಬಾಟಲಿಗಳು, ಒಂದು ಬಟ್ಟೆಯ ತುಣುಕು, ಅಸ್ಪ್ರಶ್ಯತೆಯನ್ನು ಹೋಗಲಾಡಿಸುವ ಕುರಿತಾಗಿರುವ ಮಹಾತ್ಮಾ ಗಾಂಧೀಜಿಯವರ ಸಚಿತ್ರ ವರದಿಯನ್ನುಳ್ಳ ಮರಾಠಿ ಭಾಷೆಯ ಒಂದು ವಾರ ಪತ್ರಿಕೆ, ಕನ್ನಡದಲ್ಲಿ ಬರೆದ ರಾಷ್ಟ್ರೀಯ ಗೀತೆಗಳನ್ನು ಒಳಗೊಂಡ ನೋಟ್ ಪುಸ್ತಕದಿಂದ ಹರಿದು ಕೊಳ್ಳಲ್ಪಟ್ಟ ಎರಡು ಹಾಳೆಗಳು, ಜರ್ಮನ ಭಾಷೆಯಲ್ಲಿ ಇರುವ ಪಾಠದ ಟಿಪ್ಪಣಿಗಳ ಒಂದು ಹಾಳೆಗಳು ದೊರೆತವು.

ಮಲ್ಲಪ್ಪ ಪರಪ್ಪ ಕೊಕಟನೂರ, ಶಂಕ್ರೆಪ್ಪ ಸಿದ್ದಲಿಂಗಪ್ಪ ನಾವಿ ಸಾ/ ಸಾವಳಗಿ, ಬಸಗೌಡ ರಾಮಗೌಡ ನ್ಯಾಮಗೌಡರ ಸಾ/ ಸಾವಳಗಿ, ಮಧ್ವರಾಜ ಬಾಳಕೃಷ್ಣ ದೇಶಪಾಂಡೆ ಇವರಲ್ಲಿ ಆಪಾದನೆ ಹೊರಿಸಲ್ಪಡುವಂತಹ ಯಾವುದೇ ವಸ್ತುಗಳು ದೊರೆಯಲಿಲ್ಲ. ಮತ್ತು ವಿಶೇಷವಾಗಿ ಹೇಳುವುದೇನೆಂದರೆ, ಭೀಮಾ ಮಾಯಪ್ಪ ಕದಮ, ಬಸಪ್ರಭು ದುಂಡಪ್ಪ ದಲಾಲ, ಶಂಕರ ಬಸವಂತಪ್ಪ ಪತ್ತಾರ ಮತ್ತು ಕೃಷ್ಣಾ ಬಾಲು ಚವ್ಹಾಣ ಸಾ/ ಸಾವಳಗಿ ಇವರಲ್ಲಿ ಯಾವುದೇ ವಸ್ತುಗಳು ಕಂಡು ಬರಲಿಲ್ಲ.

ಆಪಾದಿತರನ್ನು ಮತ್ತು ಅವರ ಕೈಚೀಲಗಳನ್ನು ಶೋಧಿಸಿದ ತರುವಾಯ, ತತ್‌ಕ್ಷಣವೇ ಒಳಸಂಚಿನ ಯೋಜನೆಯ ಕುರಿತು ಶೋಧನಾ ಕಾರ್ಯವು ಪ್ರಾರಂಭಿಸಲ್ಪಟ್ಟಿತು. ಮತ್ತು ಈ ಕಾರ್ಯಕ್ಕಾಗಿ ಒಬ್ಬ ಪೊಲೀಸ್ ಸಬ್‌ಇನ್‌ಸ್ಪೆಕ್ಟರನನ್ನು ನೇಮಿಸಲಾಯಿತು. ಅವರು ಹಿಡಕಲ್ಲ ಗ್ರಾಮಕ್ಕೆ ತೆರಳಿ ಅಪಾದಿತರ ಮನೆಗಳನ್ನು ಶೋಧಿಸುವ ಕಾರ್ಯ ಕೈಕೊಂಡರು, ಮತ್ತು ಮಂಗಸೂಳಿ ಗ್ರಾಮಕ್ಕೆ ತೆರಳಿ, ಅಲ್ಲಿರುವ ಒಬ್ಬ ದೇಶಪಾಂಡೆ ಅವರ ಮನೆಯಲ್ಲಿಯೂ ಶೋಧನಾ ಕಾರ್ಯವನ್ನು ಮಾಡಲಾಯಿತು. ಈ ಶೋಧನೆಗಳಲ್ಲಿ ಯಾವುದೇ ವಿದ್ರೋಹಾತ್ಮಕ ವಸ್ತುಗಳು ದೊರೆಯಲಿಲ್ಲ. ಈ ಕುರಿತಾಗಿ ಪೋಲಿಸ ಇಲಾಖೆಯು ಮೇಲಾಧಿಕಾರಿಗಳಿಗೆ ಒಂದು ವರದಿಯನ್ನು ಸಲ್ಲಿಸಿತು.

ಸರಕಾರದ ಖಜಾನೆಯ ದರೋಡೆಗೆ ಸಂಬಂಧಿಸಿದಂತೆ ಇನ್ನೂ ಕೆಲವು ಮಹತ್ವದ ಶೋಧನೆಗಳನ್ನು ಮಾಡಲೇ ಬೇಕಾಗಿತ್ತು. ಕಾರಣವೇನೆಂದರೆ, ಇದೇ ವೇಳೆಯಲ್ಲಿ ತಾಲುಕಿನಲ್ಲಿ ಅನೇಕ ಕಡೆಗೆ ಸರ್ಕಾರದ ಖಜಾನೆಗಳು ಲೂಟಿ ಮಾಡಿದ ಘಟನೆಗಳು ಯಶಸ್ವಿಯಾಗಿ ನಡೆದಿದ್ದವು. ಆದರೆ ಅಥಣಿ ಪೋಲಿಸ್ ಸಬ್‌ಇನಸ್ಪೆಕ್ಟರನು ಈ ಕೇಸಿಗೆ ಸಂಬಂಧಪಟ್ಟಂತೆ ಯಾವುದೇ ಕಾರ್ಯಾಚರಣೆಯ ಪ್ರಗತಿಯನ್ನು ಸಾಧಿಸಲಿಲ್ಲ. ನಂತರ ಈ ಕೇಸಿನ ಬಗ್ಗೆ ವಿಶೇಷ ಶೋಧನಾ ಕಾರ್ಯವನ್ನು, ಅಪರಾಧ ಶೋಧನಾ ಇಲಾಖೆಯ ಇನ್‌ಸ್ಪೇಕ್ಟರರಾದ ಸಾಂಬ್ರಾಣಿ ಎಂಬುವವರಿಗೆ ಒಪ್ಪಿಸಲಾಯಿತು. ಈ ಶೋಧನಾ ಕಾರ್ಯಕ್ಕಾಗಿ ಇವರನ್ನು ವಿಶೇಷ ಅಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಇವರ ಜೊತೆಗೂಡಿ ಕೆಲಸ ಮಾಡಲು ಭೀಮಗೌಡ ಪಾಟೀಲ ಎಂಬ ಸಬ್‌ಇನ್‌ಸ್ಪೆಕ್ಟರನನ್ನು ಜೋಡಿಸಲಾಯಿತು. ಈ ಕೇಸಿಗೆ ಸಂಬಂಧ ಪಟ್ಟಂತೆ ಹಲವಾರು ಸಾಕ್ಷ್ಯಾಧಾರಗಳನ್ನು ಪರೀಶಿಲಿಸಲಾಯಿತು.

**೩.೨೫. ಬೆಳಗಾವಿ ಹಿಂಡಲಗಾ ಸೆರೆಮನೆಯಲ್ಲಿ ಚಳುವಳಿಕಾರರು :**

ಅಥಣಿಯ ಠಾಣೆಯ ಸಿ.ಆಯ್.ಡಿ ಪೋಲಿಸ ಇನ್‌ಸ್ಪೆಕ್ಟರ ಸಾಂಬ್ರಾಣಿಯವರು ಬಹು ಕ್ರೂರ ಅಧಿಕಾರಿಯಾಗಿದ್ದರು. ಸ್ವಾತಂತ್ರ್ಯ ಚಳುವಳಿಕಾರರನ್ನು ಕಂಡರೆ, ಕೆಂಡ ಕಾರುತ್ತಿದ್ದರು ಬಂಧನದಲ್ಲಿದ್ದ ಚಳುವಳಿಕಾರರಿಗೆ ಅನೇಕ ಕಷ್ಟಗಳನ್ನು ನೀಡಿದರು. ಬಂಧನದಲ್ಲಿದ್ದ ಹೋರಾಟಗಾರರಿಗೆ ಹಲವಾರು ಪ್ರಶ್ನೆಗಳನ್ನು ಕೇಳುತ್ತಿದ್ದರು. ತೃಪ್ತಿದಾಯಕವಾದ ಉತ್ತರ ಬರದಿದ್ದಾಗ, ನೀವೆಲ್ಲ ಹೀಗೆ ಸಿದಾ-ಸಾದಾ ಹೇಳುವುದಿಲ್ಲ, ನಿಮಗೆ ಲಾಠಿ ರುಚಿ ತೋರಿಸಿದಾಗ ಮಾತ್ರ ನೀವು ನಿಜವಾದ ಬಾಯಿಬಿಡುವಿರೆಂದು ಅಂಜಿಕೆ ಹಾಕುತ್ತಿದ್ದರು, ಪ್ರಸಂಗ ಬಂದಾಗ ಲಾಠಿ ರುಚಿಯನ್ನು ತೋರಿಸುತ್ತಿದ್ದರು. ಹೋರಾಟಗಾರರು ಇಲ್ಲಿ ಸಾಕಷ್ಟು ನೋವನ್ನು ಅನುಭವಿಸಿದರು. ಕೆಲವು ದಿನಗಳ ವರೆಗೆ ಅಥಣಿಯ ಪೋಲಿಸ ಸ್ಟೇಷನದಲ್ಲಿಯೇ ಇದ್ದ ಸ್ವಾತಂತ್ರ್ಯ ಹೋರಾಟಗಾರರನ್ನು ನಂತರ, ಬೆಳಗಾವಿಯ ಕಿಲ್ಲಾ ಜೈಲಿಗೆ ವರ್ಗಾಯಿಸಿ, ವಿಚಾರಣಾಧೀನ ಕೈದಿಗಳನ್ನಾಗಿ ಇಡಲಾಯಿತು. ಈ ಹೋರಾಟಗಾರರು ಬೆಳಗಾವಿ ಜೈಲಿನಲ್ಲಿದ್ದಾಗ, ಚೆನ್ನಪ್ಪ ವಾಲಿ ಮತ್ತು ಇನ್ನೂ ಅನೇಕ ಜಿಲ್ಲೆಯ ಪ್ರಮುಖ

ಸ್ವಾತಂತ್ರ್ಯ ಹೋರಾಟಗಾರರ ಸಂಪರ್ಕವಾಯಿತು. ಹಿಂಡಲಗಾ ಜೈಲಿನಲ್ಲಿ ಸುಮಾರು ೫-೬ ತಿಂಗಳವರೆಗೆ ವಿಚಾರಣಾ ಕೈದಿಯಾಗಿ ಇರಬೇಕಾಯಿತು.

**೩.೨೩. ಚಳುವಳಗಾರರ ನ್ಯಾಯ ವಿಚಾರಣೆ :**

ಬೆಳಗಾವಿ ಡಿವಿಜನ್ ಸೆಷನ್ಸ ನ್ಯಾಯಾಲಯದಲ್ಲಿ, ಸ್ಪೇಷಲ್ ಕೇಸ್ ನಂಬರ ೧/೧೯೪೩ ರ ಪ್ರಕಾರ ವಿಚಾರಣೆಯು ನಡೆಯಿತು. ಶ್ರೀ ಪಿ. ಎಂ. ಲಾಡ ಎಂಬುವರು ಆಗ ಸೆಷನ್ಸ ಹಾಗೂ ಡಿಸ್ಟ್ರಿಕ್ಟ ನ್ಯಾಯಾಧೀಶರಾಗಿದ್ದರು. ಇವರು ರಾಜಕೀಯ ಖಟ್ಲೆಗಳಲ್ಲಿ ಬಂಧಿತರಾದ ಆರೋಪಿಗಳೊಂದಿಗೆ ಬಹಳ ಸಹಾನೂಭೂತಿಯಿಂದ ನಡೆದು ಕೊಳ್ಳುತ್ತಿದ್ದರು. ಅವರ ಮುಂದೆ ಬಂದ ಸ್ವಾತಂತ್ರ್ಯ ಹೋರಾಟಗಾರರ ನೂರಕ್ಕೆ ತೊಂಬತ್ತೈದು ಖಟ್ಲೆಗಳನ್ನು ಅವರು ಬಿಟ್ಟು ಬಿಡುತ್ತಿದ್ದರು. ಆದರೆ ಬಲವಾದ ಕ್ರಿಮಿನಲ್ ಆರೋಪಗಳಿದ್ದು ಜೀವಂತ ಸಾಕ್ಷಿಗಳು ದೊರೆತ ಸಂಧರ್ಬಗಳಲ್ಲಿ ಮಾತ್ರ, ವಿರಳವಾಗಿ ಸಜೆಯ ಆದೇಶಗಳನ್ನು ಮಾಡುತ್ತಿದ್ದರು.

ನ್ಯಾಯಾಧೀಶರ ಮುಂದೆ ೫-೬ ತಿಂಗಳುಗಳವರೆಗೆ ವಿಚಾರಣೆಯು ನಡೆಯಿತು. ಹೋರಾಟಗಾರರ ಹತ್ತಿರ ದೊರೆತ ಕರಪತ್ರಗಳು ಮತ್ತು ಈ ಮೊದಲು ಹಂಚಲ್ಪಟ್ಟ ಕರಪತ್ರಗಳು, ಕೊಕಟನೂರ ಪೋಲಿಸ ಪಾಟೀಲನ ಮಗನಿಗೆ ಕೊಟ್ಟ ಕೈಬರಹದ ಪತ್ರಕ್ಕೆ ತುಲನಾತ್ಮಕವಾಗಿ ಹೋಲಿಸಿ ನೋಡಿ, ಸತ್ಯ ಸಂಗತಿಯನ್ನು ಕಂಡು ಹಿಡಿಯಲು, ಅಪರಾಧ ಸಂಶೋಧನಾ ಇಲಾಖೆಗೆ ಒಪ್ಪಿಸಲಾಯಿತು. ಅವರು ಅವುಗಳನ್ನು ಕೈಬರಹ ಪತ್ರಿಕೆಗಳ ಸಂಶೋಧನಾ ತಜ್ಞರ ಮೂಲಕ ಹೋಲಿಸಿ ಅವುಗಳನ್ನು ಪತ್ತೆ ಹಚ್ಚಿದರು.

ಅನಂತ ಕುಲಕರ್ಣಿಯವರು, ವಿದ್ರೋಹಾತ್ಮಕ ಒಳಸಂಚಿನ ಸಲುವಾಗಿ ಕಾರ್ಯಕರ್ತರನ್ನು ಭರ್ತಿ ಮಾಡಿಕೊಳ್ಳುವುದು ಮತ್ತು ಬ್ರಿಟಿಷ ಅಡಳಿತ ವಿರುದ್ಧ ಮತ್ಸರದ ಭಾವನೆಯನ್ನು ಹರಡುವ ಸಾಹಿತ್ಯವನ್ನು ಹಳ್ಳಿಗಳಲ್ಲಿ ಪ್ರಚುರ ಪಡಿಸುವ ಕಾರ್ಯದಲ್ಲಿ ನಿರತರಾಗಿದ್ದರು. ಅಂತಹ ಅನಂತ ಕುಲಕರ್ಣಿಯವರ ಜೊತೆ ಇವರು ಸಂಪರ್ಕ ಹೊಂದಿರುವ ಬಗ್ಗೆ ನ್ಯಾಯ ವಿಚಾರಣೆ ಮಾಡಲಾಯಿತು.

ಹಣಮಂತ ಕುಲಕರ್ಣಿ, ರಾಣು ಡೋರ್, ವಿಟ್ಟು ಮಹಾರ್ ಮತ್ತು ಅಥಣಿಯ ಹಿಪ್ಪರಗಿ ವಕೀಲನ ಕಾರಕೂನ, ಅಥಣಿಯ ಹೋಟೆಲ ಮಾಲಿಕ, ಸಾವಳಗಿಯ ಸಬ್‌ಇನ್‌ಸ್ಪೆಕ್ಟರ, ಇವರೆಲ್ಲರ ಹೇಳಿಕೆಯ ಮೇಲಿಂದ ಕಂಡು ಬರುವುದೇನೆಂದರೆ, ಹೋರಾಟಗಾರರ ತಂಡವು ವಿದ್ರೋಹಾತ್ಮಕ ಕಾರ್ಯಗಳಲ್ಲಿ ತೊಡಗಿದ್ದು, ಹೋರಾಟಗಾರರ ತಂಡವು ಹಿಡಕಲ್ಲ ಬಿಟ್ಟು ಅಥಣಿಗೆ ಬಂದದ್ದು, ಅಥಣಿಯಿಂದ ಸಾವಳಗಿಗೆ ಹೋಗಿದ್ದು, ಸಾವಳಗಿಯಿಂದ ಕೊಕಟನೂರ ಮುಖಾಂತರ ಹಿಂತಿರುಗಿ ಅಥಣಿಗೆ ಬಂದದ್ದು, ಮತ್ತು

ಆಪಾದಿತರ ಹತ್ತಿರ ದೊರೆತ ವಸ್ತುಗಳ ಆಧಾರದ ಮೇಲೆ, ಅಥಣಿಯ ಮೋಟರ್ ಸ್ಟ್ಯಾಂಡಿನಲ್ಲಿ ಆಪಾದಿತರು ವಿದ್ರೋಹಾತ್ಮಕ ವಸ್ತುಗಳ ಜೊತೆಗಿದ್ದು, ಅಪರಾಧ ಮಾಡಲು ಸನ್ನದ್ಧರಾದ ಬಗ್ಗೆ ನ್ಯಾಯ ವಿಚಾರಣೆ ನಡೆಯಿತು. ಈ ಎಲ್ಲಾ ಸಾಕ್ಷಾಧಾರಗಳ ಹಿನ್ನಲೆಯಲ್ಲಿ, ಎಲ್ಲಾ ೧೪ ಜನ ಆಪಾದಿತರು ಈ ಮೋದಲೇ ಹೇಳಿದಂತ ವಿದ್ರೋಹಾತ್ಮಕ ಒಳಸಂಚಿನಲ್ಲಿ ಒಳಗೊಂಡಿದ್ದರೆಂಬುದು ಕಂಡು ಬರುತ್ತದೆ. ಅದಕ್ಕೆ ಅನುಸಾರವಾಗಿ ಈ ಎಲ್ಲಾ ೧೪ ಆಪಾದಿತರು ಭಾರತೀಯ ದಂಡ ಸಂಹಿತೆಯ ೧೨೧ ಬಿ ಕಲಂ ಪ್ರಕಾರ ವಿಧ್ವಂಸಕ ಒಳಸಂಚಿನಲ್ಲಿ ನಿಜವಾದ ಅಪರಾಧವನ್ನು ಮಾಡಿದ್ದಕ್ಕಾಗಿ, ಶಿಕ್ಷೆಗೆ ಒಳಪಡಲು ಅರ್ಹರಾಗಿರುತ್ತಾರೆಂದು ನ್ಯಾಯಾಲಯ ತಿರ್ಮಾನಿಸಿತು.

ಇದಲ್ಲದೆ, ಮೊದಲಿನ ೧೩ ಜನ ಆಪಾದಿತರು ಇನ್ನೊಂದು ಆಪಾದನೆಗೂ ಕೂಡ ಒಳಗಾಗುತ್ತಾರೆ. ಭಾರತೀಯ ಸಂರಕ್ಷಣಾ ಕಾಯ್ದೆಯ ಸೆಕ್ಷನ್ ೩೫ ಎ ಮತ್ತು ಬಿ ಹಾಗೂ ಸೆಕ್ಷನ್ ೧೨೧ ಪ್ರಕಾರ ವಿದ್ರೋಹಾತ್ಮಕ ಚಟುವಟುಕೆಗಳಾದ, ತಾರ ತಂತಿಗಳನ್ನು ಕತ್ತರಿಸುವುದು, ರೈಲು ಹಳಿಗಳನ್ನು ಕೀಳುವುದು, ಸರ್ಕಾರಿ ಕಟ್ಟಡಗಳಿಗೆ ಬೆಂಕಿ ಹಚ್ಚುವುದು ಮುಂತಾದವುಗಳಿಗೆ ಪೂರ್ವ ತಯಾರಿಯನ್ನು ಮಾಡಿದರೆಂಬ ಕಾರಣಕ್ಕಾಗಿ ಆರೋಪಕ್ಕೆ ಒಳಗಾಗುತ್ತಾರೆ.

ಅಪರಾಧಗಳನ್ನು ಎಸಗಬೇಕೆಂಬ ಉದ್ದೇಶದಿಂದ ಈ ಮೇಲ್ಕಾಣಿಸಿದ ೧೪ ಜನರು ಬಸ್ ಸ್ಟ್ಯಾಂಡಿನಲ್ಲಿ ಜಮಾಯಿಸಿದ್ದರು. ಇದು ಭಾರತೀಯ ದಂಡ ಸಂಹಿತೆಯ ೧೪೩ನೇ ಕಲಂ ಪ್ರಕಾರ ಬೇಕಾಯ್ದೇಶಿರ ಜಮಾವಣೆಯ ಅಪರಾಧಕ್ಕೆ ಒಳಪಡುತ್ತಾರೆ. ಮತ್ತು ಇದರಲ್ಲಿಯ ಮೊದಲ ನಾಲ್ಕು ಜನ ಆಪಾದಿತರು ಮಾರಣಾಂತಿಕ ಶಸ್ತ್ರಾಸ್ತ್ರಗಳನ್ನು ಹೊಂದಿದ್ದಕ್ಕಾಗಿ ಮತ್ತು ಇಂತಹ ವಿದ್ರೋಹಾತ್ಮಕ ಸಂಘಟನೆಯಲ್ಲಿ ಕೂಡಿಕೊಂಡದ್ದಕ್ಕಾಗಿ ಭಾರತೀಯ ದಂಡ ಸಂಹಿತೆಯ ೧೪೪ ಕಲಂ ಪ್ರಕಾರ ಶಿಕ್ಷಗೆ ಗುರಿಯಾಗುತ್ತಾರೆ. ಆಪಾದಿತ ನಂಬರ ೫ ಮತ್ತು ೮ ಇವರು ಮನಸ್ಸು ಕೆಡಿಸುವ / ದುರಭಿಪ್ರಾಯದ ವರದಿಗಳನ್ನು ತಯಾರಿಸಿದಕ್ಕಾಗಿ ಭಾರತೀಯ ರಕ್ಷಣಾ ಕಾಯ್ದೆಯ ೩೮ ಸಿ ಪ್ರಕಾರ ಅಪರಾಧಿಗಳೆಂದು ನಿರ್ಣಯಿಸಲ್ಪಡುತ್ತಾರೆ. ಆಪಾದಿತ ನಂಬರ ೧, ೨ ಮತ್ತು ೯ ಇವರುಗಳು ಇಂತಹುದೇ ದುರಭಿಪ್ರಾಯದ ಸಾಹಿತ್ಯವನ್ನು ಪ್ರಚುರ ಪಡಿಸಿದ ಆರೋಪಕ್ಕಾಗಿ ಇದೇ ಕಾಯ್ದೆಯ ಅಡಿಯಲ್ಲಿ ಆರೋಪಿಗಳೆಂದು ಸಾಬಿತಾಗುತ್ತಾರೆ.

ಆಪಾದಿತ ನಂಬರ ೧, ೨ ಮತ್ತು ೫ ಇವರು ಶಸ್ತ್ರಾಸ್ತ್ರಗಳನ್ನು, ಮದ್ದು ಗುಂಡುಗಳನ್ನು ಹೊಂದಿದ್ದ ಅಪರಾಧಕ್ಕಾಗಿ ಭಾರತೀಯ ಶಸ್ತ್ರಾಸ್ತ್ರಗಳ ಕಾಯ್ದೆಯ ಕಲಂ ೧೯ ಎಫ್ ರ ಪ್ರಕಾರ ಅಪರಾಧಿಗಳೆಂದು ಪರಿಗಣಿಸಲ್ಪಡುತ್ತಾರೆಂದು ನ್ಯಾಯಾಲಯದಲ್ಲಿ ನ್ಯಾಯವಿಚಾರಣೆಯ ಸಂದಂರ್ಭದಲ್ಲಿ ತೀರ್ಮಾನಿಸಲಾಯಿತು.

## ೩.೨೭. ಚಳುವಳಿಗಾರರಿಗೆ ನ್ಯಾಯಾಲಯ ನೀಡಿದ ಶಿಕ್ಷೆ :

ದಿನಾಂಕ ೩೧-೦೩-೧೯೪೩ರಂದು ಮಾಡಲಾದ ಆದೇಶದಲ್ಲಿ, ಇಮಾಮಸಾಹೇಬ ಹುಸೇನಸಾಬ ಮುಲ್ಲಾ, ನಿಂಗಪ್ಪ ಪಾಯಪ್ಪ ಆ್ಯಂಟಿನ, ಸಾ/ ಬನಹಟ್ಟಿ. (ಜಮಖಂಡಿ ಸಂಸ್ಥಾನ), ಲಕ್ಷ್ಮಣ ಅಣ್ಣಪ್ಪ ಡಾಂಗೆ, ಮೌಲಾಲಿ ಹುಸೇನಸಾಬ ಮುಲ್ಲಾ, ಮತ್ತು ಮಹಮ್ಮದ ಹೈದರ ಮೊಘಲ, ಸಾ/ ಸಾವಳಗಿ, ಇವರು ಅಪರಾಧಿಗಳೆಂದು ಕೋರ್ಟ ಅದೇಶವನ್ನು ಮಾಡಿತು.

ಭಾರತೀಯ ರಕ್ಷಣಾತ್ಮಕ ಕಾಯ್ದೆ ೧೨೧ರ ಕಲಂ, ೩೫ ಎ ಮತ್ತು ಬಿ ಮೇರೆಗೆ, ಇಮಾಮಸಾಹೇಬ ಹುಸೇನಸಾಬ ಮುಲ್ಲಾ ಮತ್ತು ನಿಂಗಪ್ಪ ಪಾಯಪ್ಪ ಆ್ಯಂಟಿನ, ಸಾ/ ಬನಹಟ್ಟಿ. (ಜಮಖಂಡಿ ಸಂಸ್ಥಾನ), ಇವರಿಗೆ ೩ ೧/೨ ವರ್ಷಗಳ ಸಶ್ರಮ ಶಿಕ್ಷೆಯನ್ನು (ಕಠಿಣ ಶಿಕ್ಷೆಯನ್ನು) ವಿಧಿಸಲಾಯಿತು.

ಮಹಮ್ಮದ ಹೈದರ ಮೊಘಲ, ಸಾ/ ಸಾವಳಗಿ ಇವರಿಗೆ ೨ ೧/೨ ವರ್ಷಗಳ ಸಶ್ರಮ ಶಿಕ್ಷೆಯನ್ನು ವಿಧಿಸಲಾಯಿತು. ಲಕ್ಷ್ಮಣ ಅಣ್ಣಪ್ಪ ಡಾಂಗೆ, ಮೌಲಾಲಿ ಹುಸೇನಸಾಬ ಮುಲ್ಲಾ, ಇವರಿಗೆ ೨ ವರ್ಷಗಳ ಸಶ್ರಮ ಶಿಕ್ಷೆಯನ್ನು ವಿಧಿಸಲಾಯಿತು.

ಅಲ್ಲದೇ, ಭಾರತೀಯ ರಕ್ಷಣಾತ್ಮಕ ಕಾಯ್ದೆ ೩೯ರ ಪ್ರಕಾರ ಇಮಾಮಸಾಹೇಬ ಹುಸೇನಸಾಬ ಮುಲ್ಲಾ, ನಿಂಗಪ್ಪ ಪಾಯಪ್ಪ ಆ್ಯಂಟಿನ, ಸಾ/ ಬನಹಟ್ಟಿ. (ಜಮಖಂಡಿ ಸಂಸ್ಥಾನ), ಲಕ್ಷ್ಮಣ ಅಣ್ಣಪ್ಪ ಡಾಂಗೆ ಮತ್ತು ವಾಸುದೇವ ಅಲ್ಲಪ್ಪ ನಾಯಿಕ ಇವರಿಗೆ, ೧ ವರ್ಷಗಳ ಕಠಿಣ ಶಿಕ್ಷೆಯನ್ನು ವಿಧಿಸಲಾಯಿತು.

ಇಮಾಮಸಾಹೇಬ ಹುಸೇನಸಾಬ ಮುಲ್ಲಾ ಮತ್ತು ನಿಂಗಪ್ಪ ಪಾಯಪ್ಪ ಆ್ಯಂಟಿನ, ಸಾ/ ಬನಹಟ್ಟಿ. (ಜಮಖಂಡಿ ಸಂಸ್ಥಾನ) ಮತ್ತು ಲಕ್ಷ್ಮಣ ಅಣ್ಣಪ್ಪ ಡಾಂಗೆ ಇವರಿಗೆ ೨ ತಿಂಗಳ ಕಠಿಣ ಶಿಕ್ಷೆಯನ್ನು ವಿಧಿಸಲಾಯಿತು. ನ್ಯಾಯಾಲಯವೂ ಎಲ್ಲ ಆಪಾದಿತರಿಗೂ ಶಿಕ್ಷೆಯನ್ನು ಜೊತೆ-ಜೊತೆಯಾಗಿ ಅನುಭವಿಸಲು ಆದೇಶಿಸಿತು. ಬಾಕಿ ಉಳಿದ ಎಲ್ಲರನ್ನು ನಿರಪರಾಧಿಗಳೆಂದು ಬಿಡುಗಡೆ ಮಾಡಿತು.

## ೩.೨೮. ಸಫಲತೆ ಕಂಡ ಸಂಗ್ರಾಮ, ನನಸಾದ ಸ್ವಾತಂತ್ರ್ಯದ ಕನಸು :

ರಾಜಬಂಧಿಗಳೆಂಬ ಹಣೆಪಟ್ಟಿ ಪಡೆದುಕೊಂಡ ಕೆಲ ಸ್ವಾತಂತ್ರ್ಯ ಹೋರಾಟಗಾರರು ಜೈಲುವಾಸವನ್ನು ಅನುಭವಿಸಿದರೆ, ಇನ್ನು ಕೆಲವರು ನಿರಪರಾಧಿಗಳೆಂದು ಬಿಡುಗಡೆಗೊಂಡವರು ಗ್ರಾಮಕ್ಕೆ ಹಿಂತಿರುಗಿ, ಮತ್ತೆ ಚಳುವಳಿಯಲ್ಲಿ ಸಕ್ರೀಯರಾದರು. ಅವರು

ಭೂಗತರಾಗಿದ್ದುಕೊಂಡೆ ತಮ್ಮ ಹೋರಾಟವನ್ನು ಮುಂದುವರೆಸಿದರು. ಇಂತಹ ಸಾವಿರಾರು ಯೋಧರ ಪ್ರಾಮಾಣಿಕ ಹೋರಾಟದ ಫಲವಾಗಿ, ಹಲವು ದಶಕಗಳಿಂದ ಕನಸಾಗಿಯೇ ಇದ್ದ 'ಸ್ವಾತಂತ್ರ್ಯ' ನನಸಾಗುವ ಕಾಲ ಸನ್ನಿಹಿತವಾಯಿತು. ಸಾವಿರಾರು ಯೋಧರ ತ್ಯಾಗ ಬಲಿದಾನಗಳಿಂದಾಗಿ ಸಫಲತೆಯನ್ನು ಕಂಡ "ಭಾರತದ ಸ್ವಾತಂತ್ರ್ಯ ಸಂಗ್ರಾಮ"ವು ೧೯೪೭ರ ಅಗಸ್ಟ್ ೧೫ ರಂದು ಸ್ವಾತಂತ್ರ್ಯವನ್ನು ಪಡೆದುಕೊಳ್ಳುವ ಮೂಲಕ ಯಶಸ್ವಿಯಾಯಿತು.



---

## ಟಿಪ್ಪಣಿಗಳು

೧) ಕೆವಿನ್ಎ–ಎಚ್ಚಾರ್ಕೆ : ದ್ವಿತೀಯ ಪಿ.ಯು. ಪಠ್ಯಪುಸ್ತಕ–ಇತಿಹಾಸ–೨. ಪುಟ–೨೮೯.

೨) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ–೧.ಪುಟ ೬೦. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೩) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ–೧.ಪುಟ–೭೯. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೪) ಅದೇ. ಪುಟ–೮೬.

೫) ಅದೇ. ಪುಟ–೮೯.

೬) ಅದೇ. ಪುಟ–೯೦.

೭) ಡಾ. ಸರೋಜಿನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ. ಪುಟ–V. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೮) ಅದೇ. ಪುಟ– vi.

೯) ಡಾ. ಸರೋಜಿನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು.ಬೆಳಗಾವಿ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ. ಪುಟ viii. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೧೦) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ-೧.ಪುಟ-೧೦೨. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೧೧) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ಬೆಳಗಾವಿ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ. ಪುಟ- viii. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೧೨) ಬಾ.ಯ. ದೇಶಪಾಂಡೆ (ಅಂಣು ಗುರೂಜಿ): ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ-೧.ಪುಟ.-೧೦೨. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೧೩) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ಬೆಳಗಾವಿ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ-ಪುಟ-viii. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೧೪) ಅದೇ-ಪುಟ-x.

೧೫) ಡಾ. ಸರೋಜೀನಿ ಚವಲಾರ : ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು. ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ-ಪುಟ-vi. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೧೬) ಅದೇ-ಪುಟ-vi.

೧೭) ಅದೇ-ಪುಟ-vi.

೧೮) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ ಅಧ್ಯಾಯ-೮. ಪುಟ-೪೧. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೧೯) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ-೧.ಪುಟ ೧೬೫. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೨೦) ಡಾ. ವ್ಹಿ.ಎಸ್.ಮಾಳಿ : ಸ್ವಾತಂತ್ರ್ಯ ಸೇನಾನಿ ಸಂಕೇಶ್ವರದ ಅಪ್ಪಣ್ಣಗೌಡರು.

೨೧) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ-೧. ಪುಟ ೨೪೯. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೨೨) ಡಾ. ವ್ಹಿ.ಎಸ್.ಮಾಳಿ : ಸ್ವಾತಂತ್ರ್ಯ ಸೇನಾನಿ ಸಂಕೇಶ್ವರದ ಅಪ್ಪಣ್ಣಗೌಡರು.

೨೩) ಬಾ.ಯ. ದೇಶಪಾಂಡೆ (ಅಂಣು ಗುರೂಜಿ) : ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ-೧. ಪುಟ ೨೪೦. ಪ್ರಕಾಶ : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ.

೨೪) ಡಾ. ಸರೋಜಿನಿ ಚವಲಾರ : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು. ರಾಯಬಾಗ ತಾಲ್ಲೂಕಿನ ಸ್ವರಾಜ್ಯ ಸ್ಥಾಪನೆಯ ಹಿನ್ನೆಲೆ. ಪುಟ–vii. ಪ್ರಕಾಶಕರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ.

೨೫) ಬೆಳಗಾವಿ ಡಿವಿಜನ್ ಸೆಷನ್ ನ್ಯಾಯಾಲಯದ ಸ್ಪೆಷಲ್ ಕೇಸ ನಂಬರ ೧/೧೯೪೩ ಆದೇಶ ಪ್ರತಿ ಬೆಳಗಾವಿ.

# ಅಧ್ಯಾಯ : ನಾಲ್ಕು

# ಹೋರಾಟದ ಸ್ವರೂಪ ಹಾಗೂ ಪರಿಣಾಮಗಳು

# ಅಧ್ಯಾಯ : ನಾಲ್ಕು

# ಹೋರಾಟದ ಸ್ವರೂಪ ಹಾಗೂ ಪರಿಣಾಮಗಳು

---

ಹಿಡಕಲ್ಲ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಟಗಾರರು, ಮಾಡಿದಂತ ಹೋರಾಟ ಬಹಳ ಪ್ರಾಮುಖವಾದುದು. ಉಪ್ಪಿನ ಸತ್ಯಾಗ್ರಹ, ಅಸ್ಪೃಶ್ಯತಾ ನಿವಾರಣಾ ಆಂದೋಲನ, ೧೯೪೧ರ ವೈಯಕ್ತಿಕ ಸತ್ಯಾಗ್ರಹ, ಸರ್ಕಾರಿ ಟ್ರೇಜರಿ ಲೂಟಿ ಮಾಡುವ, ಪೋಸ್ಟ್ ಆಫೀಸನ್ನು ಸುಡುವ, ೧೯೪೨ರ ಚಲೇಜಾವ ಚಳುವಳಿ, ಮುಂತಾದ ಈ ಎಲ್ಲಾ ಚಟುವಟಿಕೆಗಳನ್ನು ಹೋರಾಟಗಾರರ ತಂಡವು ಮಾಡುತ್ತಿತ್ತು. ಇವೆಲ್ಲದರ ಮುಖ್ಯ ಉದ್ದೇಶ ಬ್ರಿಟಿಷ ಆಡಳಿತ ಯಂತ್ರವನ್ನು ನಿಸ್ತೇಜಗೊಳಿಸುವುದಾಗಿತ್ತು. ಈ ಎಲ್ಲಾ ಚಟುವಟಿಕೆಗಳನ್ನು ಈ ಹಿಂದಿನ ಅಧ್ಯಾಯದಲ್ಲಿ ಹೇಳಲಾಗಿದೆ.

**೪.೧. ಹೋರಾಟದ ಸ್ವರೂಪ** :

ಸ್ವಾತಂತ್ರ್ಯ ಹೋರಾಟಗಾರರ ಚಟುವಟಿಕೆಗಳಲ್ಲಿ ವಿದ್ವಂಸಕತೆ ಕಂಡು ಬಂದರೂ ಕೂಡ, ಮಹಾತ್ಮ ಗಾಂಧೀಜಿಯವರ ಅಹಿಂಸಾ ಚೌಕಟ್ಟಿನಲ್ಲಿ ಆ ಚಟುವಟಿಕೆಗಳು ಸಿಮೀತವಾಗಿರುವುದು ಕಂಡು ಬರುತ್ತದೆ. ಯಾವ ಕಾರ್ಯದಲ್ಲಿಯೂ ಅವರು ಶಸ್ತ್ರಾಸ್ತ್ರಗಳನ್ನು ಬಳಸಿ ಜನರ ಜೀವನಕ್ಕೆ ವಿರೋಧ ಮಾಡಿದ್ದನ್ನು ನಾವು ಕಾಣುವುದಿಲ್ಲ. ಅದರೆ ಕಛೇರಿಗಳನ್ನು, ರೈಲ್ವೆ ಸ್ಟೇಷನ್‌ಗಳಿಗೆ ಬೆಂಕಿ ಹಚ್ಚುವಂಥ ವಿದ್ವಂಸಕ ಚಟುವಟಿಕೆಗಳಿಗೆ, ಮಹಾತ್ಮ ಗಾಂಧೀಜಿಯವರ ಬೆಂಬಲವಿತ್ತೆಂಬುದನ್ನು ಹೇಳುತ್ತಾರೆ. ಆದರೆ ಸ್ವಾತಂತ್ರ್ಯ ನಂತರದಲ್ಲಿ ನಡೆದ ಚಳುವಳಿಯಲ್ಲಿ ಇವರೂ ಹಿಂಸಾ ಮಾರ್ಗವನ್ನು ಅನುಸರಿಸುವುದಿಲ್ಲ, ಇದು ಬಹಳ ಮುಖ್ಯವಾದದ್ದು, ಗಾಂಧೀಜಿ ಹತ್ಯೆಯ ನಂತರ ಸಂಪೂರ್ಣ ಅಹಿಂಸಾಮಾರ್ಗಕ್ಕೆ ಬರುತ್ತಾರೆ.

ಹಿಡಕಲ್ಲ ಸ್ವಾತಂತ್ರ್ಯ ಹೋರಾಟ ವ್ಯಷ್ಠಿ ಸ್ವರೂಪದಲ್ಲ. ಸಮಷ್ಠಿ ಸ್ವರೂಪದ್ದು. ಇಡೀ ಗ್ರಾಮವೇ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಂಡಿತ್ತು, ಗಾಂಧೀಜಿಯ ಕರೆಗೆ ಸಂಪೂರ್ಣ ದೇಶ ಎಚ್ಚೆತ್ತು ಕೊಂಡಂತೆ, ಹಿಡಕಲ್ಲ ಗ್ರಾಮ ಗಾಂಧೀಜಿಯವರ ಸ್ವಾತಂತ್ರ್ಯ ನಡೆಯನ್ನು ತೀಕ್ಷ್ಣವಾಗಿ ಗಮನಿಸುತ್ತಿತ್ತು. ಒಂದು ಅರ್ಥದಲ್ಲಿ ಇದು ದೇಶದ ಸಮಗ್ರ ಆಂದೋಲನವಿದ್ದಂತೆ. ಹಿಡಕಲ್ಲ ಬೆಳಗಾವಿ ಜಿಲ್ಲೆಯ ಅತ್ಯಂತ ಹಿಂದುಳಿದ ಸಣ್ಣ ಗ್ರಾಮವಾಗಿದ್ದರೂ ಸ್ವಾತಂತ್ರ್ಯ ಚಳುವಳಿಗೆ ಅದ್ಭುತ ರೀತಿಯಲ್ಲಿ ಸ್ಪಂದಿಸಿದ್ದೇ ಒಂದು

ಆಶ್ಚರ್ಯ. ಯಾವುದೇ ಗ್ರಾಮದ ಚರಿತ್ರೆ ಸಾಂಸ್ಕೃತಿಕ ಹಿನ್ನೆಲೆಯ ಮೇಲೆ ರೂಪಗೊಳ್ಳುತ್ತದೆ ಎಂಬುದಕ್ಕೆ ಇದುವೇ ಸಾಕ್ಷಿ. ಇದಕ್ಕೆ ಕಾಂಗೇಸ್ಸ ಪ್ರಭಾವ ಕಾರಣವಾಗಿರಬಹುದು.

ಆ ಕಾಲದಲ್ಲಿ ಕಾಂಗ್ರೇಸ್ಸ ಸಂಘಟನೆಯೆಂದರೆ, ಸ್ವಾತಂತ್ರ್ಯ ಆಂದೋಲನದ ಸಂಘಟನೆಯೆಂದೇ ಅರ್ಥ. ಸ್ವಾತಂತ್ರ್ಯ ಚಳುವಳಿಗಾರರೆಲ್ಲ, ಕಾಂಗ್ರೇಸ್ಸಿಗರು. ಕಾಂಗ್ರೇಸ್ಸಿನ ಮುಖ್ಯ ಉದ್ದೇಶವೇ, ಬ್ರಿಟಿಷರ ವಿರುದ್ಧ ಜನಾದೊಂಲನ ರೂಪಿಸುವುದಾಗಿತ್ತು. ಹೀಗಾಗಿ ಸಾಂಸ್ಕೃತಿಕ ಚರಿತ್ರೆಯಲ್ಲಿ ಎಚ್ಚರದ ನೆಲೆಯೆಂದು ಗುರುತಿಸಿಕೊಂಡಿರುವ, ಹಿಡಕಲ್ಲ ಸ್ವಾತಂತ್ರ್ಯ ಹೋರಾಟದ ಹೆಜ್ಜೆಗಳು ಅವಿಸ್ಮರಣೀಯ ದಾಖಲೆಗಳು.

ಇಲ್ಲಿಯ ಸ್ವಾತಂತ್ರ್ಯ ಆಂದೋಲನದಲ್ಲಿ ಮೂರು ಸ್ಥರದ ಜನರು ಪಾಲ್ಗೊಂಡಿದ್ದರು. ಒಂದು ಹಿರಿಯರು. ಎರಡು ತರುಣರು. ಮೂರು ವಿದ್ಯಾರ್ಥಿಗಳು. ಮೊದಲ ಸ್ಥರದ ಹಿರಿಯರು, ಆಂದೋಲನದ ಮಾರ್ಗದರ್ಶಕರು. ಎರಡನೆಯ ಸ್ಥರದ ತರುಣರು ಸ್ವಾತಂತ್ರ್ಯ ಚಳುವಳಿಯಲ್ಲಿ ನೇರವಾಗಿ ಧುಮುಕಿದ ಸೇನಾನಿಗಳು. ವಿದ್ಯಾರ್ಥಿಗಳು ತರುಣರಿಗೆ ನೈತಿಕ ಬೆಂಬಲ ಸೂಚಿಸಿ, ಶಾಲೆಯಿಂದ ಹೊರಬಂದು ಸಂಘಟನೆಗೆ ಪೂರಕವಾಗಿ ಕೆಲಸ ಮಾಡಿದರು. ಕರಪತ್ರಗಳನ್ನು ಬರೆಯುವುದು, ಮತ್ತು ಹರಡುವುದು, ಸಭೆಗಳನ್ನು ಸಂಘಟಿಸುವುದು, ಸಭೆಗಳಿಗೆ ಜನರನ್ನು ಸೇರಿಸುವುದು, ಘೋಷಣೆಗಳನ್ನು ಕೂಗುತ್ತ ಓಣಿ-ಓಣಿಗಳನ್ನು ಸುತ್ತುವುದು (ಪ್ರಭಾತ ಪೇರಿ ಮಾಡುವುದು) ಮುಂತಾದವುಗಳು ವಿದ್ಯಾರ್ಥಿಗಳ ಕಾರ್ಯಕ್ರಮಗಳಾಗಿದ್ದವು.

ಮಹಾತ್ಮ ಗಾಂಧೀಜಿಯವರು ಅಹಿಂಸಾತ್ಮಕ ಚಳುವಳಿಗೆ ಕರೆಕೊಟ್ಟಿದ್ದರೂ, ಎಷ್ಟೋ ಸಲ ಅದು ಹಿಂಸಾ ರೂಪಕ್ಕೆ ಇಳಿದಿದ್ದುಂಟು. ಆಗ ಮನನೊಂದು ಗಾಂಧೀಜಿ ಉಪವಾಸ ಕೈಗೊಳ್ಳುತ್ತಿದ್ದರೆಂಬ ವಿಷಯ ಇತಿಹಾಸದಿಂದ ತಿಳಿದು ಬರುತ್ತದೆ. ಹಿಡಕಲ್ಲ ಗ್ರಾಮದ ತರುಣರು ಮಾತ್ರ ಬ್ರಿಟಿಷರ ಆಡಳಿತ ಯಂತ್ರವನ್ನು ಸ್ಥಗಿತಗೊಳಿಸುವ ವಿಧ್ವಂಸಕ ಕೃತ್ಯಗಳಿಗೆ ಗಾಂಧೀಜಿಯ ಅನುಮತಿ ಇತ್ತೆಂದು ತಿಳಿದಿದ್ದರು. ಕೆಲವರು ಅದನ್ನು ಸ್ಪಷ್ಟವಾಗಿ ಹೇಳುವುದನ್ನು ಗಮನಿಸಿದಾಗ, **ಒಂದು ಚಳುವಳಿ ಎಷ್ಟೇ ಅಹಿಂಸಾತ್ಮಕ ಸ್ವರೂಪದ್ದಾಗಿದ್ದರೂ ತೀರ ಕೆಳಸ್ಥರದ ಆಂದೋಲನಕಾರರು ಅಹಿಂಸೆಯನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದಿರುವ ಅಂಶ ಗಮನಕ್ಕೆ ಬರುತ್ತದೆ.** ಅಂದು ಈಗಿನಷ್ಟು ಸಂಪರ್ಕ ಮಾಧ್ಯಮಗಳು ಬೆಳೆದಿರಲಿಲ್ಲ. ಗಾಂಧೀಜಿಯವರ ಕರೆ ಅಂತೆ-ಕಂತೆಯ ಕಥೆಯಾಗಿ, ಹಳ್ಳಿಗಳಿಗೆ ಮುಟ್ಟುತ್ತಿತ್ತು. ಗ್ರಾಮ ಮಟ್ಟದ ಚಳುವಳಿಗಾರರಿಗೆ ಅಹಿಂಸೆಗಿಂತಲೂ ವಿಧ್ವಂಸಾತ್ಮಕ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿ. ಟಪಾಲು ಕಸಿಯುವುದು, ಚಾವಡಿ ಹಾಗೂ ಖಜಾನೆಗಳನ್ನು ಲೂಟಿ ಮಾಡುವುದು, ಪೋನ್ ಕಂಬ ಕೀಳುವುದು, ತಂತಿ ಕತ್ತರಿಸುವುದು, ರೈಲು ನಿಲ್ದಾಣಗಳನ್ನು ಸುಡುವುದು ಮೊದಲಾದ ಚಟುವಟಿಕೆಗಳಲ್ಲಿ ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರು ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ.

ಅದಕ್ಕಾಗಿ ಸರಕಾರ ನಿಷೇಧಿಸಿದ ಶಸ್ತ್ರಾಸ್ತ್ರಗಳನ್ನು ಹೊಂದಿರುತ್ತಾರೆ. ಇದು ಸ್ವಾತಂತ್ರ್ಯ ಹೋರಾಟಗಾರರ ಎರಡನೆಯ ಸ್ಥರದವರ ಕಥೆ.

ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ, ಲಕ್ಷ್ಮಣ ಅಣ್ಣಪ್ಪ ಡಾಂಗೆ, ಮೌಲಾಲಿ ಹುಸೇನಸಾಹೇಬ ಮುಲ್ಲಾ, ವಾಸುದೇವ ಅಲ್ಲಪ್ಪ ನಾಯಿಕ, ಭೀಮರಾವ ಮಾಯಪ್ಪ ಕದಮ, ಮಲ್ಲಪ್ಪ ಪರಪ್ಪ ಕೊಕಟನೂರ, ಬಸಪ್ರಭು ದುಂಡಪ್ಪ ದಲಾಲ, ಶಂಕರ ಬಸವಂತಪ್ಪ ಪತ್ತಾರ, ಮಧ್ವರಾಜ ಬಾಳಕೃಷ್ಣ ದೇಶಪಾಂಡೆ, ಮೊದಲಾದವರು ತರುಣ ಪಡೆಯ ಮುಂದಾಳುಗಳು. ಇವರ ಕಡೆಗೆ ಶಸ್ತ್ರಾಸ್ತ್ರಗಳಿದ್ದವು ಅದಕ್ಕಾಗಿ ಜೈಲು ಶಿಕ್ಷೆ ಅನುಭವಿಸುತ್ತಾರೆ. ಆದರೆ ತಾವು ಮಾಡಿದ್ದು ಕಾನೂನ ಬಾಹಿರವೆಂದು ಅವರು ಒಪ್ಪಿಕೊಳ್ಳುವುದಿಲ್ಲ. ಬ್ರಿಟಿಷ ಸರಕಾರದ ಕಾನೂನು ಭಂಗವು ಕೂಡ ಸ್ವಾತಂತ್ರ್ಯ ಚಳುವಳಿಯ ಒಂದು ಅಂಗವೆಂದು ತಿಳಿದಿದ್ದರು. ಅಂದರೆ, ಹಿಡಕಲ್ಲದ ಸ್ವಾತಂತ್ರ್ಯ ಹೋರಾಟದಲ್ಲಿ ಹಿಂಸೆ ಮತ್ತು ಅಹಿಂಸೆ ಪರಸ್ಪರ ಮುಖಾಮುಖಿಯಾಗುತ್ತಿದ್ದದ್ದು ಸ್ಪಷ್ಟ. ಹಾಗೆ ಯೋಚಿಸಿದರೆ ಇದು ಹಿಂಸೆ ಹಾಗೂ ಅಹಿಂಸೆಗಳ ಸಂಯುಕ್ತ ಹೋರಾಟ. ಆದರೆ ಕೊಲೆ ಸುಲಿಗೆಯಂತಹ ಯಾವ ಕೃತ್ಯಗಳು ಇಲ್ಲಿ ನಡೆಯುವುದಿಲ್ಲ. ಬ್ರಿಟಿಷ ಅಧಿಕಾರಿಗಳನ್ನು ಕೊಲ್ಲುವುದಾಗಲಿ ಅಥವಾ ವ್ಯಕ್ತಿಗತವಾಗಿ ದೋಚುವುದಾಗಲಿ ಇಲ್ಲಿ ನಡೆಯಲಿಲ್ಲ. ಅವರ ಹೋರಾಟ ನೇರವಾಗಿ ಸರಕಾರದೊಂದಿಗಿನ ಸಂಘರ್ಷವಾಗಿತ್ತು.

ಈ ಚಳುವಳಿ ಹಿಂಸಾತ್ಮಕ ಸ್ವರೂಪ ಪಡೆಯದಂತೆ ರಾಮಪ್ಪ ಕಂಕಣವಾಡಿಯಂತ ಹಿರಿಯರು ಕಟ್ಟುನಿಟ್ಟಿನ ಸೂಚನೆ ಕೊಡುತ್ತಿದ್ದರು. ಇದನ್ನು ಆ ಕಾಲದ ಅಲ್ಲಿಯ ಲಾವಣಿ ಕವಿಗಳು ತಮ್ಮ ಲಾವಣಿಗಳಲ್ಲಿ ಹೇಳಿದ್ದನ್ನು ಹಿಂದೆ ಉಲ್ಲೇಖಿಸಲಾಗಿದೆ. ರಾಮಪ್ಪ ಕಂಕಣವಾಡಿಯವರು ಹಿಡಕಲ್ಲ ಸ್ವಾತಂತ್ರ್ಯ ಹೋರಾಟದ ದಿಕ್ಸೂಚಿ. ಅವರೊಂದಿಗಿದ್ದ ಭೀಮಪ್ಪ ಬಡಿಗೇರ, ಕಂಕಣವಾಡಿಯವರಿಂತ ಚಿಕ್ಕವರು, ಉಳಿದ ತರುಣರಿಗಿಂತ ದೊಡ್ಡವರು. ಭೀಮಪ್ಪ ಬಡಿಗೇರ ತರುಣ ಮತ್ತು ಹಿರಿಯರ ಪಡೆಗಳ ಮಧ್ಯೆ ಸೇತುವಾಗಿ ಕೆಲಸ ಮಾಡಿದರು. ಅವರಲ್ಲಿ ಸ್ವಾತಂತ್ರ್ಯಕ್ಕಾಗಿ ಎಂತಹ ಕಷ್ಟಗಳಿಗೂ ಎದೆಯೊಡ್ಡುವ ಉತ್ಸಾಹವಿತ್ತು. ಜೈಲುಯೆಂದರೆ ಹೆದರಿಕೆ ಇರಲಿಲ್ಲ. ಸರಕಾರದ ನೌಕರರಿಗೆ ಸವಾಲು ಹಾಕುವ ಎದೆಗಾರಿಕೆ ಇತ್ತು. ಹಿಡಕಲ್ಲ ಗ್ರಾಮವನ್ನು ಸ್ವಾತಂತ್ರ್ಯ ಆಂದೋಲನದೊಂದಿಗೆ ಬೆಸುಗೆ ಹಾಕಿದವರು ಇಬ್ಬರು ಮಹನೀಯರು. ಒಬ್ಬರು ಅಥಣಿಯ ಅನಂತ ಶಾಮರಾವ ಕುಲಕರ್ಣಿ, ಇನ್ನೊಬ್ಬರು ಪಾಶ್ಚಾಪೂರದ ಅಣ್ಣುಗುರೂಜಿ, ಆದರೆ ಇವರಿಗಿಂತ ಮೊದಲು ಹಿಡಕಲ್ಲದಲ್ಲಿ ಆಂದೋಲನದ ಕಿಚ್ಚು ಹೊತ್ತಿಸಿದವರು ಗೋಕಾಕ ತಾಲೂಕಿನ ಕಂಡ್ರಟ್ಟಿ ಗ್ರಾಮದ ಉದ್ದಪ್ಪ ಕೆಂಚಪ್ಪ ಎತ್ತಿನಮನಿ. ಇವರು ಕಂಕಣವಾಡಿಯ ರಾಮಪ್ಪನವರ ಸಂಬಂಧಿಕರಾಗಿದ್ದರಿಂದ ಹಿಡಕಲ್ಲಗೆ ಪದೇ-ಪದೇ ಬರುತ್ತಿದ್ದರು. ಸ್ವಾತಂತ್ರ್ಯ ಹೋರಾಟ ಹಲವು ಮನೆತನಗಳ ನಡುವಿನ ಸಂಬಂಧದಿಂದ ಬೆಳೆದು ವ್ಯಾಪಕವಾಗಿರಬಹುದು.

ಹಿಡಕಲ್ಲದ ಸ್ವಾತಂತ್ರ್ಯ ಚಳುವಳಿ ಹಾಗೂ ಕರ್ನಾಟಕ ಏಕೀಕರಣದ ಚಳುವಳಿ ಜೊತೆ–ಜೊತೆಯಾಗಿ ನಡೆದವು. ಆದರೆ ಅವರ ಕನ್ನಡ ಪ್ರೇಮ ಕನ್ನಡ ಶಾಲೆಯ ಸ್ಥಾಪನೆಗೆ ಮಾತ್ರ ಸಿಮೀತಗೊಂಡಿತ್ತು. ಕಾರಣವೇನೆಂದರೆ ಹಿಡಕಲ್ಲ ಗ್ರಾಮ ಅಪ್ಪಟ ಕನ್ನಡ ಪ್ರದೇಶಕ್ಕೆ ಸೇರಿದ್ದು. ಅಲ್ಲಿ ಅನ್ಯ ಭಾಷೆಗಳ ಹಾವಳಿ ಇರಲಿಲ್ಲ.

**೪.೨. ಹೋರಾಟದ ಪರಿಣಾಮಗಳು :**

ಗ್ರಾಮದೊಳಗೆ ಸ್ವಾತಂತ್ರ್ಯ ಪ್ರಜ್ಞೆಯನ್ನು ಮೂಡಿಸಿದ್ದು ಈ ಆಂದೋಲನದ ಅತ್ಯಂತ ತೀವ್ರವಾದ ಪರಿಣಾಮವಾಗಿದೆ. ರಾಷ್ಟ್ರಪ್ರೇಮ, ನಾಡು ನುಡಿ ಕುರಿತು ಅಭಿಮಾನ ಎಲ್ಲಕ್ಕಿಂತಲೂ ಹೆಚ್ಚಾಗಿ ಸಾಮರಸ್ಯದ ಮನೋಭಾವ, ಜಾತ್ಯಾತೀತ ದೃಷ್ಟಿ ಇವುಗಳು ಅಲ್ಲಿ ಮೂಡಿದ್ದವು. ಜೊತೆಗೆ ಮಹಾತ್ಮ ಗಾಂಧೀಜಿಯವರು ಹೇಳಿದ ಹಾಗೆ ಅಲ್ಲಿ ಸ್ವಚ್ಚತೆಯ ಪ್ರಜ್ಞೆ ಮೂಡಿ ಬಂತು. ತಮ್ಮ ಗ್ರಾಮವು ಒಂದು ಆದರ್ಶ ಗ್ರಾಮವಾಗಬೇಕು. ಅಲ್ಲಿ ಎಲ್ಲರಿಗೂ ಶಿಕ್ಷಣ ಸೌಲಭ್ಯ ಸಿಗುವಂತಾಗಬೇಕು, ಅಲ್ಲಿಯ ಒಟ್ಟು ಆಡಳಿತ ವ್ಯವಸ್ಥಿತವಾಗಿರಬೇಕು, ಜೊತೆಗೆ ಎಂತಹ ಒಂದು ಪ್ರಜ್ಞೆ ಆ ಕಾಲದಲ್ಲಿ ಮೂಡಿಬಂತೆಂದರೆ, ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಎನ್ನುವ ಎರಡು ವರ್ಗಗಳಿದ್ದು, ಆದರಲ್ಲಿ ಬ್ರಾಹ್ಮಣೇತರ ಅಂದರೆ ಅತ್ಯಂತ ಕೆಳ ಸಮುದಾಯದಂತಹ ವರ್ಗಗಳ ಅಭಿವೃದ್ಧಿಯನ್ನು ಹುಟ್ಟು ಹಾಕಿರುವಂತಹ ಜ್ಯೋತಿಭಾ ಪುಲೆಯವರ 'ಸತ್ಯ ಶೋಧಕ ಸಮಾಜ' ದ ಒಂದು ಸಂಘಟನೆಯ ಶಾಖೆ ಹಿಡಕಲ್ಲದಲ್ಲಿ ತೆರೆದದ್ದು ಒಂದು ದೊಡ್ಡ ಪರಿಣಾಮ. ಇವು ಸ್ವಾತಂತ್ರ್ಯ ಚಳುವಳಿಯ ನೇರ ಪರಿಣಾಮಗಳು. ಅಂದರೆ ಆ ಅರಿವು ಎಷ್ಟರ ಮಟ್ಟಿಗೆ ಜನರಲ್ಲಿ ಜಾಗೃತವಾಗಿತ್ತು ಎನ್ನುವುದಕ್ಕೆ ಇದು ಸಾಕ್ಷಿಯಾಗುತ್ತದೆ.

ಸ್ವಾತಂತ್ರ್ಯ ಸಂದರ್ಭದಲ್ಲಿಯೂ ಕೂಡ ಅವರ ಸ್ವಾತಂತ್ರ್ಯದ ಉತ್ಕಟತೆ ಎಷ್ಟಿತ್ತೆಂದರೆ, ಅವರು ಅನೇಕ ಸಲ ಜೈಲಿಗೆ ಹೋಗುತ್ತಾರೆ. ಆದರೆ ಜೈಲಿನಿಂದ ತಮ್ಮ ವ್ಯಕ್ತಿತ್ವಕ್ಕೆ, ಗೌರವಕ್ಕೆ ಕುಂದೆಂದು ಎಂದೂ ತಿಳಿಯುವುದಿಲ್ಲ. ಅದೊಂದು ಹೆಮ್ಮೆ ಆಭಿಮಾನವೆಂದೇ ಭಾವಿಸಿಕೊಳ್ಳುತ್ತಾರೆ. ಆಮೇಲೆ ಸ್ವಾತಂತ್ರ್ಯಾ ನಂತರವು ಕೂಡ ಅದೆಷ್ಟು ಆದರ್ಶ ವ್ಯಕ್ತಿಗಳಾಗಿ ಮಾರ್ಪಾಡಾಗುತ್ತಾರೆಂದರೆ, ದೇಶದೆಲ್ಲೆಡೆಗೆ ಸ್ವಾತಂತ್ರ್ಯ ಹೋರಾಟಗಾರರಿಗೆ, ಸ್ವಾತಂತ್ರ್ಯ ಪಿಂಚಣಿ ದೊರೆಯುತ್ತಿರುವಾಗ ಆ ಪಿಂಚಣಿಯನ್ನು ನಿರಾಕರಿಸುವ ಹಂತಕ್ಕೆ ಈ ಕೆಲವು ಜನರು ಹೋರಾಟಗಾರರು ಪ್ರಭುದ್ಧರಾಗಿದ್ದು ಕಂಡು ಬರುವುದು. ಇನ್ನೂ ಕೆಲವು ಜನ ತಮ್ಮ ಸ್ವಾತಂತ್ರ್ಯ ಪ್ರೇಮವನ್ನು ಕಾಂಗ್ರೇಸ್ಸನ್ನು ಸ್ಥಾಪಿಸಿ ಬೆಳೆಸುವುದರ ಮೂಲಕ ಸ್ವತಂತ್ರ್ಯ ಭದ್ರ ಭಾರತವನ್ನು ನಿರ್ಮಿಸುವಂಥ ಕನಸು ಕಾಣುವುದರ ಮೂಲಕ ಅದನ್ನು ನೇರವೆರಿಸಿ ಕೊಡುತ್ತಾರೆ. ಇವು ಪ್ರಮುಖ ಪರಿಣಾಮಗಳು.

ರಾಯಬಾಗ ತಾಲೂಕಿನಲ್ಲಿಯೇ ಮೊಟ್ಟಮೊದಲ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದವರೆಂಬುದು, ಅವರು ಶಿಕ್ಷಣಕ್ಕೆ ಕೊಟ್ಟ ಪ್ರಾಮುಖ್ಯತೆಗೆ ಉದಾಹರಣೆಯಾಗಿರುತ್ತದೆ. ೪೦-೫೦ ವರ್ಷಗಳ ಹಿಂದೆಯೇ ತೋಟ ತೋಟಗಳಲ್ಲಿ ಶಾಲೆಯನ್ನು ಪ್ರಾರಂಭಿಸಿದರು. ಉದಾಹರಣೆಗೆ ಮನ್ನಿಕೇರಿ ತೋಟದ ಶಾಲೆಯ ಸ್ಥಾಪನೆ ಇದು ಒಂದು ಸಣ್ಣ ಅರಿವಲ್ಲ. ಅದೊಂದು ಪ್ರಬುದ್ಧತೆಯ ಪ್ರತೀಕವಾಗಿತ್ತು. ತೋಟದಲ್ಲಿರುವ ಮಕ್ಕಳು ಶಿಕ್ಷಣ ಸೌಲಭ್ಯವನ್ನು ಪಡೆಯುವಂತಾಗಲಿ ಎಂಬ ಪ್ರಜ್ಞೆ ತೋಟದ ಜನಸಾಮಾನ್ಯರಲ್ಲಿಯೂ ಕಂಡು ಬಂದಿತು.

ಈ ಅರಿವಿನ ಹಣತೆಗೆ ಸ್ವಾತಂತ್ರ್ಯದ ಸ್ಪರ್ಶ ಇರುವುದನ್ನು ಅಲ್ಲಗಳೆಯುವಂತಿಲ್ಲ. ಸಾಂಸ್ಕೃತಿಕವಾಗಿ ಬೆಳೆದದ್ದನ್ನು ಕೂಡ ಹೇಳಬಹುದು. ಲಾವಣಿಕಾರನ ಲಾವಣಿಗಳಲ್ಲಿ ಸ್ವಾತಂತ್ರ್ಯದ ಚರಿತ್ರೆಯನ್ನು ಕಟ್ಟಿ ಜನಸಾಮಾನ್ಯರಿಗೆ ತಲುಪಿಸಿದ್ದು ಕೂಡ ಒಂದು ವಿಶೇಷ ಪರಿಣಾಮ. ಬ್ರಾಹ್ಮಣ, ಬ್ರಾಹ್ಮಣೇತರ ಚಳುವಳಿ ರೂಪಗೊಂಡಂತ ಸಮಯದಲ್ಲಿ ಕಾಂಗ್ರೇಸ್ಸಿನಲ್ಲಿಯೂ ಕೂಡ ಅಂದರೆ ಸ್ವಾತಂತ್ರ್ಯ ಹೋರಾಟಗಾರರಲ್ಲಿಯೂ ಕೂಡ ಎರಡು ಪಂಗಡಗಳು ಕಂಡು ಬಂದು, ಸ್ವಾತಂತ್ರ್ಯ ಆಂದೋಲನವೇ ಇಬ್ಭಾಗವಾದದ್ದು ಕಂಡು ಬರುತ್ತದೆ. ಬ್ರಾಹ್ಮಣರ ಒಂದು, ಬ್ರಾಹ್ಮಣೇತರರ ಇನ್ನೊಂದು ಪಂಗಡ ಕಂಡು ಬಂದು ಆ ಪಂಗಡಗಳ ಮಧ್ಯ ಸಂಘರ್ಷಕ್ಕೆ ನಾಂದಿಯಾಗಬಹುದಿತ್ತು. ಆದರೆ ಹಿರಿಯರ ಮುಂದಾಲೋಚನೆಯಿಂದ ಅದು ಸಂಘರ್ಷಕ್ಕೆ ದಾರಿ ನೀಡದೇ ಶಾಂತ ಸ್ಥಿತಿಯತ್ತ ನಡೆಯಿತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಎನ್ನುವ ನೆಲೆಯೊಳಗೆ ಹೋರಾಟವು ಎರಡು ಹೋಳಾಗದೇ ಮತ್ತೆ ಒಂದಾಗಿ ಹೋರಾಟದಲ್ಲಿ ಭಾಗಿಯಾಗಿದ್ದು ಕಂಡು ಬರುತ್ತದೆ.

ಇವರು ಸ್ವಾತಂತ್ರ್ಯ ಆಂದೋಲನದಲ್ಲಿ ಹೆಚ್ಚು ಕಡಿಮೆ ಹಿಂಸಾ ಮಾರ್ಗವನ್ನು ಈ ಚಳುವಳಿಕಾರರು ಹಿಡಿದಿದ್ದರು ಕೂಡ ಸ್ವಾತಂತ್ರ್ಯ ನಂತರದಲ್ಲಿ ಗಾಂಧೀಜಿಯವರ ಹತ್ಯೆಯಾಗುತ್ತದೆ. ಹತ್ಯೆಯಾದ ಸಂದಂರ್ಭದಲ್ಲಿ ಅದು ಬ್ರಾಹ್ಮಣ ಸಂಚೆಂದು ದೇಶದ ಇಡೀ ಜನತೆ ಭಾವಿಸಿಕೊಳ್ಳುತ್ತಾರೆ. ಆವಾಗ ಬ್ರಾಹ್ಮಣರ ಮನೆಗಳನ್ನು ಸುಡುವಂತಹ ಒಂದು ಪಡೆ ನಿರ್ಮಾಣಗೊಳ್ಳುತ್ತದೆ. ಆಗ ಬ್ರಾಹ್ಮಣರ ಮನೆಗಳನ್ನು ಸುಡುವುದೇ ಒಂದು ಚಳುವಳಿಯಾಗಿ ರೂಪಗೊಳ್ಳುತ್ತದೆ. ಈ ಭಾಗದಲ್ಲಿ ಅದನ್ನು 'ಜಾಳ ಪೋಳ' ಎಂದು ಕರೆಯುತ್ತಿದ್ದರು. ಆದರೆ ಹಿಡಕಲ್ಲದಲ್ಲಿ ಮಾತ್ರ ಅದು ಆಗಲಿಲ್ಲ. ಮುಂದೆ ನಿಂತು ತಮ್ಮ ಗ್ರಾಮದ ಬ್ರಾಹ್ಮಣ ಮನೆತನದ ಮೇಲಿನ ಸಂಭವನೀಯ ದಾಳಿಯನ್ನು, ಊರ ಹೊರಗೆ ತಡೆದು, ತಮ್ಮ ಗ್ರಾಮವನ್ನು ರಕ್ಷಿಸಿಕೊಳ್ಳುತ್ತಾರೆ. ಬ್ರಾಹ್ಮಣರಿಗೂ ಸಂಪೂರ್ಣ ರಕ್ಷಣೆಯನ್ನು ನೀಡುತ್ತಾರೆ. ಸ್ವಾತಂತ್ರ್ಯ ಹೋರಾಟಗಾರರು ಸ್ವಾತಂತ್ರ್ಯ ಸಿಕ್ಕ ನಂತರ ಹಿಂಸಾವಾದಿಗಳಾಗಿದ್ದವರು, ಅಹಿಂಸಾವಾದಿಗಳಾಗಿ ಮಾರ್ಪಡುತ್ತಾರೆ. ಒಂದು ಗ್ರಾಮದ ತಮ್ಮೆಲ್ಲರಲ್ಲಿ ಒಕ್ಕಟ್ಟನ್ನು ಕಾಪಾಡಿಕೊಳ್ಳಬೇಕು. ತಾವೆಲ್ಲರೂ ಒಂದು ಎನ್ನುವ ಮನೋಭಾವನೆ ಅವರಲ್ಲಿ ಅದಾಗಲೇ ಜಾಗೃತಗೊಂಡಿತ್ತು. ಇದು ಕೂಡ ಒಂದು ನೇರವಾದಂತ ಪರಿಣಾಮ.

ಭಾರತಸ ಸ್ವಾತಂತ್ರ್ಯಗೊಂಡಂತ ಸಮಯದಲ್ಲಿ ಭಾರತ, ಪಾಕಿಸ್ತಾನ ಇಬ್ಬಾಗಗೊಂಡಾಗ ಕಂಡು ಬಂದ ಮತಿಯ ಗಲಭೆಯ ಕರಿನೆರಳು ಗ್ರಾಮದ ಮೇಲೂಬಿತ್ತು. ಆ ಸಂದಂರ್ಭದಲ್ಲಿ ಮತಿಯ ಗಲಭೆಗಳಿಗೆ ಅವಕಾಶ ನೀಡದೇ ಸಾಮರಸ್ಯತೆ ಬೆಳೆಸುವಲ್ಲಿ ಈ ಹೋರಾಗಾರರು ಪ್ರಯತ್ನಿಸಿದರು. ಜಾತಿಗಳ ಮಧ್ಯದ ಸಂಘರ್ಷ ಬಹಳಷ್ಟು ಪ್ರಭಾವವನ್ನು ಹಿಡಕಲ್ಲದಲ್ಲಿ ಬೀರಿತ್ತು. ಪೂನಾದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಮಧ್ಯ ಜಾತಿ ಸಂಘರ್ಷ ಆರಂಭವಾಗಿತ್ತು. ಸಾಮಾಜಿಕ ಸುಧಾರಣೆಗಾಗಿ ಅಂದು ಪೂನಾದಲ್ಲಿ ಜ್ಯೋತಿಭಾ ಫುಲೆಯವರು ಆರಂಭಿಸಿದಂತ 'ಸತ್ಯ ಶೋಧಕ ಸಮಾಜ' ದ ಪ್ರಭಾವವು ಹಿಡಕಲ್ಲದ ಮೇಲಾಗಿತ್ತು. ಫುಲೆಯವರ ಸಾಮಾಜಿಕ ಚಟುವಟಿಕೆಗಳ ಪ್ರಭಾವ ಕೇವಲ ಪೂನಾಕ್ಕಷ್ಟೇ ಸಿಮೀತವಾಗಿರುವುದಾಗಿ ಅವರ ವಿರೋಧಿಯೊಬ್ಬರು ಟೀಕಿಸುತ್ತಾರೆ. ಆದರೆ ಕರ್ನಾಟಕದ ಒಂದು ಕೊನೆಯ ಹಳ್ಳಿಯಾದ ಹಿಡಕಲ್ಲದಲ್ಲಿ ಫುಲೆಯವರ 'ಸತ್ಯ ಶೋಧಕ ಸಮಾಜ'ದ ಒಂದು ಶಾಖೆ ಆರಂಭವಾಗಿತ್ತೆಂಬುದು ಇಲ್ಲಿಯ ನೆಲೆದ ಅಂದಿನ ಜಾಗೃತ ಭಾವನೆಯನ್ನು ತಿಳಿಸುತ್ತದೆ. ಇದು ಕೂಡ ಒಂದು ಪರಿಣಾಮ.



# ಅಧ್ಯಾಯ : ಐದು

## ಸಮಾರೋಪ

---

ಹಿಡಕಲ್ಲದ ಸ್ವಾತಂತ್ರ್ಯ ಹೋರಾಟಗಾರರ ಅಧ್ಯಯನದ ವ್ಯಾಪ್ತಿ ವಿಸ್ತೃತವಾದದ್ದು. ಅದನ್ನು ಒಂದು ಕಿರು ಪ್ರಬಂಧದಲ್ಲಿ ಹಿಡಿದಿಡಲಿಕ್ಕೆ ಆಗದು. ಅದು ಒಂದು ಮಹಾಪ್ರಬಂಧದ ವಸ್ತು. ಅದನ್ನು ಅತ್ಯಂತ ಸ್ಥೂಲವಾಗಿ ಮಾತ್ರ ಪ್ರಸ್ತುತ ಅಧ್ಯಯನದಲ್ಲಿ ಪರಿಚಯಿಸಲಾಗಿದೆ. ಅದರ ವಿವಿಧ ಆಯಾಮಗಳನ್ನು ನೋಡಲಿಕ್ಕೆ ಇಲ್ಲಿ ಅವಕಾಶವಿಲ್ಲ. ಇಲ್ಲಿ ಅವಕಾಶವಿಲ್ಲದೆ ಇರುವುದರಿಂದ ಆ ಸಾಹಸಕ್ಕೆ ಕೈ ಹಾಕಿಲ್ಲ.

ಈ ಅಧ್ಯಯನದಿಂದ ಅನೇಕ ವಿಷಯಗಳು ನಮಗೆ ಮನದಟ್ಟಾಗುತ್ತವೆ. ಮಹಾತ್ಮ ಗಾಂಧೀಜಿಯವರ ಹೋರಾಟ ಶಕ್ತಿ ಎಂತಹುದಿತ್ತೆನ್ನುವುದು ನಮಗೆ ಮನವರಿಕೆಯಾಗುತ್ತೆ. ಗಾಂಧೀಜಿ ದೊಡ್ಡ-ದೊಡ್ಡ ಪಟ್ಟಣಗಳಲ್ಲಿ ಸಂಚರಿಸುತ್ತಿದ್ದರು. ನಗರ ಪಟ್ಟಣಗಳಲ್ಲಿ ಮಹಾತ್ಮ ಗಾಂಧೀಜಿಯವರ ಪ್ರಭಾವ ಬಹಳಷ್ಟಿತ್ತು. ಆದರೆ ಅಂತಹ ಪಟ್ಟಣಗಳಿಂದ ಅಂದರೆ, ಬೆಳಗಾವಿ, ಕೊಲ್ಹಾಪೂರ, ಧಾರವಾಡ, ಬಾಗಲಕೋಟ, ಬಿಜಾಪೂರ ಮುಂತಾದ ಬಹುದೂರದ ನಗರ ಪಟ್ಟಣಗಳಿಂದ ಸುಮಾರು ೧೨೦ ಕೀ.ಮೀ. ಅಂತರದಲ್ಲಿರುವ ಒಂದು ಸಣ್ಣ ಹಳ್ಳಿ ಹಿಡಕಲ್ಲ. ಇಂತಹ ಒಂದು ಸಣ್ಣ ಹಳ್ಳಿಯೂ ಕೂಡ ಮಹಾತ್ಮ ಗಾಂಧೀಜಿಯವರ ಪ್ರಭಾವ ಇಷ್ಟರ ಮಟ್ಟಿಗೆ ಇತ್ತು, ಎಂದ ಮೇಲೆ ದೇಶದಲ್ಲಿ ಆ ಕಾಲದಲ್ಲಿ ಮಹಾತ್ಮ ಗಾಂಧೀಜಿಯ ಪ್ರಭಾವ ಎಷ್ಟರಮಟ್ಟಿಗೆ ಇತ್ತು ಎನ್ನುವುದು ಅರ್ಥವಾಗುತ್ತದೆ.

ಇಡೀ ದೇಶದ ಬಗ್ಗೆ ನಾವೆಲ್ಲ ಇತಿಹಾಸದಲ್ಲಿ ಓದುತ್ತೇವೆ, ಓದುವಾಗ ಸರಳೀಕರಿಸಿ ಓದುತ್ತೇವೆ. ನಿರ್ದಿಷ್ಟವಾಗಿ ನಾವು ಆಲೋಚನೆ ಮಾಡುವುದಿಲ್ಲ. ಆದರೆ ನಾವು ಒಂದು ನಿರ್ದಿಷ್ಟ ವಿಷಯದ ಬಗ್ಗೆ ಆಲೋಚನೆ ಮಾಡಿದಾಗ, ಅಭ್ಯಾಸ ಮಾಡಿದಾಗ ಒಂದು ಸಣ್ಣ ಹಳ್ಳಿಯಲ್ಲಿ ಇಷ್ಟು ಜನ ಹೋರಾಟಗಾರರು, ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದ್ದರು ಎನ್ನುವುದು ನಿರ್ಲಕ್ಷಿಸುವಂತಹ ವಿಷಯವಲ್ಲ. ಅದನ್ನು ದಾಖಲಿಸಲೇ ಬೇಕಾದದ್ದು ಅತೀ ಅವಶ್ಯಕ. ಇಷ್ಟಲ್ಲೇ ಇದ್ದರೂ ಕೂಡ ಇವೆಲ್ಲ ಪರಿಣಾಮ ಆಗಿದ್ದರೂ ಕೂಡ ೧೪ ಜನ ಹೋರಾಟಗಾರರು ಒಂದು ಸಣ್ಣ ಹಳ್ಳಿಯಲ್ಲಿ ರೂಪಗೊಂಡಿದ್ದರೂ ಕೂಡ ಇತಿಹಾಸದಲ್ಲಿ ದಾಖಲಿಸದೇ ಇದ್ದು, ಇವರ ಹಜ್ಜೆಗಳು ತೀರಾ ಮಸುಕಾಗಿ ದಾಖಲಿತಗೊಂಡಿರುತ್ತವೆ. ಕೇವಲ ಇಬ್ಬರು ಯೋಧರು ಮಾತ್ರ ದಾಖಲಿಸಿಕೊಂಡಿರುತ್ತಾರೆ. ಉಳಿದವರು ಎಲೆಮರೆಯ

ಕಾಯಿಯಂತೆ ಚರಿತ್ರೆಯಿಂದ ದೂರ ಉಳಿದಿದ್ದಾರೆ. ಬಹುಶಃ ಇದಕ್ಕೆ ಎರಡು ಕಾರಣಗಳಿರಬಹುದು.

ಒಂದು ಕಾರಣ ಸ್ವಾತಂತ್ರ್ಯ ಆಂದೋಲನವೇ ಹಾಗಿತ್ತು. ಇಡೀ ದೇಶಕ್ಕೆ ದೇಶವೇ ಇದರಲ್ಲಿ ಪಾಲ್ಗೊಂಡಿತ್ತು. ಅದು ವ್ಯಾಪಕವಾಗಿತ್ತು. ಅದೊಂದು ದೇಶ ವ್ಯಾಪಿ ಜನಾಂದೋಲನವಾಗಿತ್ತು.

ಇನ್ನೊಂದು ಕಾರಣ ಹೋರಾಟಗಾರರಲ್ಲಿಯ ನಿಸ್ವಾರ್ಥತೆ. ಅವರು ಅಂದು ದೇಶಾಭಿಮಾನದಿಂದ ಪ್ರಾಣವನ್ನು ಪಣಕ್ಕಿಟ್ಟು ಹೋರಾಟ ಮಾಡಿದರು. ಅವರ ಗುರಿ ಸ್ವರಾಜ್ಯವಾಗಿತ್ತು. ವಿಮೋಚನೆಗಾಗಿ ಅವರದು ಪ್ರಾಮಾಣಿಕ ಪ್ರಯತ್ನವಾಗಿತ್ತು.

ಸ್ವಾತಂತ್ರ್ಯ ಹೋರಾಟದ ಇಂತಹ ಅಧ್ಯಯನಗಳು ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವಂಥ ಕೆಲಸವನ್ನು ಮಾಡುತ್ತವೆ. ಸ್ಥಳಿಯ ಚರಿತ್ರೆಗಳು ಉಳಿಯ ಬೇಕು. ನಮಗೆ ದೇಶ ಮಟ್ಟದಲ್ಲಿ ಇತಿಹಾಸ ಎಷ್ಟು ಮುಖ್ಯವೋ, ಹಾಗೆಯೇ ಸ್ಥಳೀಯ ಇತಿಹಾಸವು ಅಷ್ಟೇ ಮುಖ್ಯ. ಈ ದೇಶವೆಂದರೆ ಅನೇಕ ಗ್ರಾಮಗಳಿಂದ ಕೂಡಿದ ದೇಶ. ಅದಕ್ಕಾಗಿಯೇ ಮಹಾತ್ಮ ಗಾಂಧೀಜಿಯವರು ಹಳ್ಳಿಗಳಿಗೆ ಹಿಂತಿರುಗಿ ಎಂದು ಕರೆ ಕೊಟ್ಟಿದ್ದರು.

ಗ್ರಾಮ ರಾಜ್ಯವೇ ರಾಮರಾಜ್ಯವೆಂದು ಗಾಂಧೀಜಿ ಗ್ರಾಮದ ಮಹತ್ವವನ್ನು ಹೇಳುತ್ತಾರೆ. ಅಂದರೆ, ಗಾಂಧೀಜಿಯವರ ಗ್ರಾಮರಾಜ್ಯವೆನ್ನುವುದು, ರಾಮರಾಜ್ಯದ ಒಂದು ಅಂಗವಾಗಿತ್ತು. ಗ್ರಾಮ ಭಾರತದ ಸಂವಿಧಾನದ ಒಂದು ಭಾಗವಾಗಿತ್ತು. ಅದನ್ನು ನನಸುಗೊಳಿಸಲಿಕ್ಕೆ ಹಿಡಕಲ್ಲನಲ್ಲಿ ಒಂದು ಪ್ರಯತ್ನ ನಡೆಯಿತು. ಸಾಂಘಿಕ ಸ್ವರೂಪದ ಆ ಪ್ರಯತ್ನವನ್ನು ಅಧ್ಯಯನ ಮಾಡುವುದೇ ಅತ್ಯಂತ ಒಂದು ಸಮಾಧಾನಾಕಾರ ವಿಷಯ. ಈ ರೀತಿಯ, ಸ್ವಾತಂತ್ರ್ಯ ಹೊರಾಟದ ಸ್ಥಳೀಯ ಅಧ್ಯಯನಗಳು ನಡೆದಲ್ಲಿ, ಸ್ವಾತಂತ್ರ್ಯ ಹೋರಾಟದ ಒಟ್ಟು ಸ್ವರೂಪವನ್ನು ತಿಳಿಯಲಿಕ್ಕೆ ಹಾಗೂ ಅತ್ಯಂತ ಪ್ರಾಯೋಗಿಕ ನೆಲೆಯಲ್ಲಿ ಗ್ರಹಿಸಲಿಕ್ಕೆ ಸಾಧ್ಯವಾಗುತ್ತದೆ.





ಮೌಲಾಲಿ ಹುಸೇನಸಾಹೇಬ ಮುಲ್ಲಾ



ಭೀಮಾ ಮಾಯಿಪ್ಪ ಕದಮ



भारत सरकार

स्वतंत्रता के पच्चीसवें वर्ष
के अवसर पर स्वतंत्रता संग्राम में
स्मरणीय योगदान के लिये राष्ट्र की ओर से
प्रधान मंत्री श्रीमती इंदिरा गांधी ने
यह ताम्रपत्र भेंट किया

15 अगस्त 1972
24 श्रावण 1894 शकाब्द



೧೯೭೨ರಲ್ಲಿ ದೆಹಲಿಯಲ್ಲಿ ಜರುಗಿದ ಸ್ವಾತಂತ್ರ್ಯ ಯೋಧರ ಸನ್ಮಾನ ಸಮಾರಂಭದಲ್ಲಿ ಆಗಿನ ಪ್ರಧಾನಿ ಇಂದಿರಾ ಗಾಂಧೀಯವರು ಇಮಾಮಸಾಹೇಬ ಹುಸೇನಸಾಹೇಬ ಮುಲ್ಲಾ ಅವರಿಗೆ ಪ್ರದಾನ ಮಾಡಿದ ತಾಮ್ರ ಪತ್ರ




೧೯೭೨ರಲ್ಲಿ ದೆಹಲಿಯಲ್ಲಿ ಜರುಗಿದ ಸ್ವಾತಂತ್ರ್ಯ ಯೋಧರ ಸನ್ಮಾನ ಸಮಾರಂಭದಲ್ಲಿ
ಆಗಿನ ಪ್ರಧಾನಿ ಇಂದಿರಾ ಗಾಂಧೀಯವರು ಲಕ್ಷ್ಮಣ ಅಣ್ಣಪ್ಪ ಡಾಂಗೆ
ಅವರಿಗೆ ಪ್ರದಾನ ಮಾಡಿದ ತಾಮ್ರ ಪತ್ರ

# ಆಕರ ಗ್ರಂಥಗಳು

## ಅ. ಗ್ರಂಥಗಳು


| | | |
|---|---|---|
| ೧ | ಕೆಎನ್‌ಎ-ಎಚ್ಚಾರ್ಕೆ | ದ್ವಿತೀಯ ಪಿ.ಯು. ಪಠ್ಯಪುಸ್ತಕ-ಇತಿಹಾಸ-೨ ಸ್ವಪ್ನ ಬುಕ್ ಹೌಸ್ ಬೆಂಗಳೂರು. (೨೦೧೦) |
| ೨ | ಬಾ.ಯ. ದೇಶಪಾಂಡೆ (ಅಂಣು ಗುರೂಜಿ) . | ಬೆಳಗಾವಿ ಜಿಲ್ಹೆಯಲ್ಲಿಯ ಸ್ವಾತಂತ್ರ್ಯ ಸಮರ ಸಂಪುಟ-೧ & ೨ ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಬೆಳಗಾವಿ. (೧೯೭೩) |
| ೩ | ಡಾ॥ ಸೂರ್ಯನಾಥ ಕಾಮತ್ | ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ತೃತೀಯ ಸಂಪುಟ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು. (೧೯೯೮) |
| ೪ | ಡಾ. ಸರೋಜೀನಿ ಚವಲಾರ | ಬೆಳಗಾವಿ ಜಿಲ್ಹೆಯ ಸ್ವಾತಂತ್ರ್ಯ ಹೋರಾಟಗಾರರು ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರಸಾವಿರಮಠ, ಹುಬ್ಬಳ್ಳಿ (೧೯೮೮) |
| ೫ | ನ್ಯಾಯಾಲಯದ ಆದೇಶ | ಬೆಳಗಾವಿ ಡಿವಿಜನ್ ಸೆಷನ್ ನ್ಯಾಯಾಲಯ ಸ್ಪೆಷಲ್ ಕೇಸ ನಂಬರ ೧/೧೯೪೩ |
| ೬ | ಸೌಥ್ ಇಂಡಿಯನ ಇನಸ್ಕ್ರಿಪ್‌ಶನ್ಸ್ ಸಂಪುಟ-೨೦. | |
| ೭ | ಹೊಂಬೆಳಕು, ವಾರ್ಷಿಕ ಸಂಚಿಕೆ, ಪುಟ-೧೦. | |


## ಆ. ಲೇಖನಗಳು


| | | |
|---|---|---|
| ೧ | ಡಾ. ವ್ಹಿ.ಎಸ್.ಮಾಳಿ | ಸ್ವಾತಂತ್ರ್ಯ ಸೇನಾನಿ ಸಂಕೇಶ್ವರದ ಅಪ್ಪಣ್ಣಗೌಡರು. |